## ಕರ್ನಾಟಕ ಸರ್ಕಾರ

**ಸಂಖ್ಯೆ:** ಇಎನ್ 73 ಪಿಪಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:23.03.2020

24/3

**ಇಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಇಂಧನ ಇಲಾಖೆ,
ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ ಡಾ॥ ಅಜಯ್ ಧರ್ಮ ಸಿಂಗ್ (ಜೇವರ್ಗಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **1298** ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಡಾ॥ ಅಜಯ್ ಧರ್ಮ ಸಿಂಗ್ (ಜೇವರ್ಗಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **1298** ಕ್ಕೆ ಉತ್ತರಗಳ 100 ಪ್ರತಿಗಳನ್ನು ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

N. mangalagi

(ಎನ್.ಮಂಗಳಗೌರಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1298

ಸದಸ್ಯರ ಹೆಸರು : ಡಾ॥ ಅಜಯ್ ಧರ್ಮ ಸಿಂಗ್ (ಜೇವರ್ಗಿ)

ಉತ್ತರಿಸಬೇಕಾದ ದಿನಾಂಕ : 24-03-2020

ಉತ್ತರಿಸುವ ಸಚಿವರು : ಮುಖ್ಯಮಂತ್ರಿ

***

| | ಪ್ರಶ್ನೆ | ಉತ್ತರ |
|---|---|---|
| ಅ) | ಜೇವರ್ಗಿ ತಾಲ್ಲೂಕಿನಲ್ಲಿ ಕಾರ್ಯನಿರ್ವಹಿಸುತ್ತಿರುವ ವಿದ್ಯುತ್ ವಿತರಣಾ ಕೇಂದ್ರಗಳೆಷ್ಟು; | ಗುಲ್ಬರ್ಗಾ ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯ ಜೇವರ್ಗಿ ತಾಲ್ಲೂಕಿನಲ್ಲಿ ಒಟ್ಟು 08 ಸಂಖ್ಯೆಯ ವಿದ್ಯುತ್ ವಿತರಣಾ ಉಪಕೇಂದ್ರಗಳು ಕಾರ್ಯನಿರ್ವಹಿಸುತ್ತಿದ್ದು, ವಿವರಗಳು ಕೆಳಗಿನಂತಿವೆ: (ಕೆಳಗಿನ ಕೋಷ್ಟಕ ನೋಡಿ) |
| ಆ) | ಸಮರ್ಪಕ ವಿದ್ಯುತ್ ಪೂರೈಕೆಗೆ ಹೆಚ್ಚುವರಿ ವಿದ್ಯುತ್ ವಿತರಣಾ ಉಪಕೇಂದ್ರಗಳ ಸ್ಥಾಪನೆಯ ಅವಶ್ಯಕತೆಯಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಪ್ರಸುತ, ಜೇವರ್ಗಿ ತಾಲ್ಲೂಕಿಗೆ ಹಾಲಿ ಕಾರ್ಯನಿರ್ವಹಿಸುತ್ತಿರುವ ವಿದ್ಯುತ್ ಉಪಕೇಂದ್ರಗಳ ಮೂಲಕ ಸಮರ್ಪಕವಾಗಿ ವಿದ್ಯುತ್ ಪೂರೈಕೆ ಮಾಡಲಾಗುತ್ತಿದೆ. ಸರ್ಕಾರದ ಆದೇಶದನ್ವಯ ರೈತರ ಕೃಷಿ ಪಂಪ್‌ಸೆಟ್‌ಗಳಿಗೆ ಐ.ಪಿ. ಫೀಡರಗಳ ಮುಖಾಂತರ ಹಗಲು ವೇಳೆಯಲ್ಲಿ 7 ಗಂಟೆಗಳ ಕಾಲ 3-ಫೇಸ್ ವಿದ್ಯುತ್ ಹಾಗೂ ಗ್ರಾಮೀಣ (ಮಿಶ್ರಿತ) ಫೀಡರಗಳ ಮುಖಾಂತರ ಹಗಲು ವೇಳೆ 4 ಗಂಟೆಗಳ ಕಾಲ ಮತ್ತು ರಾತ್ರಿ ವೇಳೆ 3 ಗಂಟೆಗಳ ಕಾಲ 3-ಫೇಸ್ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ. |
| ಇ) | ಹಾಗಿದ್ದಲ್ಲಿ, ಇನ್ನು ಎಷ್ಟು ವಿದ್ಯುತ್ ವಿತರಣಾ ಉಪ ಕೇಂದ್ರಗಳನ್ನು ಯಾವ ಗ್ರಾಮಗಳಲ್ಲಿ ಸ್ಥಾಪಿಸಲು ಉದ್ದೇಶಿಸಲಾಗಿದೆ? (ಮಾಹಿತಿ ಒದಗಿಸುವುದು) | ಅಲ್ಲದೇ, ಜೇವರ್ಗಿ ತಾಲ್ಲೂಕಿನಲ್ಲಿ ಮುಂಬರುವ ಲೋಡ್ ಬೆಳವಣಿಗೆಗಳನ್ನು ಗಮನದಲ್ಲಿರಿಸಿಕೊಂಡು ಸಮರ್ಪಕ ವಿದ್ಯುತ್ ಪೂರೈಕೆಗಾಗಿ ಜೆಸ್ಕಾಂ ವತಿಯಿಂದ ಮಳ್ಳಿ ಗ್ರಾಮದಲ್ಲಿ ಹಾಲಿ ಇರುವ 1*5 ಎಂ.ವಿ.ಎ. 33/11 ಕೆ.ವಿ. ವಿದ್ಯುತ್ ಉಪ ಕೇಂದ್ರದಲ್ಲಿ ಹೆಚ್ಚುವರಿಯಾಗಿ 1*5 ಎಂ.ವಿ.ಎ ಪರಿವರ್ತಕವನ್ನು ಅಳವಡಿಸುವ ಕಾಮಗಾರಿಯು ಪೂರ್ಣಗೊಂಡಿದ್ದು, ಪರಿವರ್ತಕವನ್ನು ಚಾಲನೆಗೊಳಿಸುವ ಪ್ರಕ್ರಿಯೆ ಜಾರಿಯಲ್ಲಿರುತ್ತದೆ. |

| ಕ್ರಸಂ | ವಿದ್ಯುತ್ ಉಪಕೇಂದ್ರ | ಸ್ಥಳ |
|---|---|---|
| 1 | 110/33/11 ಕೆ.ವಿ. | ಜೇವರ್ಗಿ |
| 2 | 110/33/11 ಕೆ.ವಿ. | ಮಂದೇವಾಲ |
| 3 | 110/33/11 ಕೆ.ವಿ. | ಯಡ್ರಾಮಿ |
| 4 | 33/11 ಕೆ.ವಿ. | ಅಂಕಲಗಾ |
| 5 | 33/11 ಕೆ.ವಿ. | ನೆಲೋಗಿ |
| 6 | 33/11 ಕೆ.ವಿ. | ಬೀಳವಾರ |
| 7 | 33/11 ಕೆ.ವಿ. | ಕೊಡಿದರ್ಗಾ |
| 8 | 33/11 ಕೆ.ವಿ. | ಮಳ್ಳಿ |

ಸಂಖ್ಯೆ: ಎನರ್ಜಿ 73 ಪಿಪಿಎಂ 2020

ಬಿ.ಎಸ್. ಯಡಿಯೂರಪ್ಪ (signature)

(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿ

# ಕರ್ನಾಟಕ ಸರ್ಕಾರ

**ಸಂಖ್ಯೆ:** ಇಎನ್ 77 ಪಿಪಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:23.03.2020

35

24/3/20

**ಇಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಇಂಧನ ಇಲಾಖೆ,
ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **2911** ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **2911** ಕ್ಕೆ ಉತ್ತರಗಳ 100 ಪ್ರತಿಗಳನ್ನು ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

N. mangalagauri

**(ಎನ್.ಮಂಗಳಗೌರಿ)**
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2911

ಸದಸ್ಯರ ಹೆಸರು : ಶ್ರೀ ದೊಡ್ಡಗೌಡರ ಮಹಾಂತೇಶ ಬಸವಂತರಾಯ (ಕಿತ್ತೂರು)

ಉತ್ತರಿಸಬೇಕಾದ ದಿನಾಂಕ : 24-03-2020

ಉತ್ತರಿಸುವ ಸಚಿವರು : ಮುಖ್ಯಮಂತ್ರಿ

***

| | ಪ್ರಶ್ನೆ | ಉತ್ತರ |
|---|---|---|
| ಅ) | ಕಿತ್ತೂರು ಪಟ್ಟಣದಲ್ಲಿರುವ ಹೆಸ್ಕಾಂ (ಕೆ.ಇ.ಬಿ) ಸೆಕ್ಷನ್ ಆಫೀಸನ್ನು ಕಿತ್ತೂರು ಪಟ್ಟಣ ಮತ್ತು ಗ್ರಾಮೀಣ ಆಫೀಸ್ ಗಳಾಗಿ ವಿಂಗಡಿಸುವ ಪ್ರಸ್ತಾವನೆಯು ಸರ್ಕಾರದ ಮುಂದಿದೆಯೇ; | ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯ ಕಿತ್ತೂರು ಪಟ್ಟಣದಲ್ಲಿರುವ ಶಾಖಾ ಕಛೇರಿಯನ್ನು ಕಿತ್ತೂರು ಪಟ್ಟಣ ಮತ್ತು ಗ್ರಾಮೀಣ ಶಾಖಾ ಕಛೇರಿಗಳನ್ನಾಗಿ ವಿಂಗಡಿಸುವ ಪ್ರಸ್ತಾವನೆಯು ಸ್ವೀಕೃತವಾಗಿರುತ್ತದೆ. |
| ಆ) | ಹಾಗಿದ್ದಲ್ಲಿ, ಸದರಿ ಪ್ರಸ್ತಾವನೆಯು ಯಾವ ಹಂತದಲ್ಲಿದೆ; | ಸದರಿ ಪ್ರಸ್ತಾವನೆಯನ್ನು ದಿನಾಂಕ: 06.11.2019 ರಂದು ಜರುಗಿದ ಹೆಸ್ಕಾಂ ಕಂಪನಿಯ ನಿರ್ದೇಶಕರ ಮಂಡಳಿಯ 90ನೇ ಸಭೆಯಲ್ಲಿ ಮಂಡಿಸಲಾಗಿರುತ್ತದೆ. |
| ಇ) | ಸದರಿ ಪ್ರಸ್ತಾವನೆಯ ಬಗ್ಗೆ ಸರ್ಕಾರವು ಯಾವ ಕಾಲಮಿತಿಯೊಳಗೆ ಕ್ರಮ ಕೈಗೊಳ್ಳುವುದು? | ವಿದ್ಯುತ್ ಸರಬರಾಜು ಕಂಪನಿಗಳಲ್ಲಿ ಯಾವುದೇ ನೂತನ ಶಾಖಾ ಕಛೇರಿ ಸೃಜಿಸಲು ಭೌಗೋಳಿಕ ಪ್ರದೇಶ, ವಿಸ್ತೀರ್ಣ, ಸ್ಥಾವರಗಳ ಸಂಖ್ಯೆ, ಜನ ಸಂಖ್ಯೆ, ಅಧಿಕಾರಿ/ಸಿಬ್ಬಂದಿ ವರ್ಗದ ಅಗತ್ಯತೆ ಮತ್ತು ಆರ್ಥಿಕ ಹೊರೆ ಮಾಹಿತಿಯನ್ನು ಮಾನದಂಡವಾಗಿರಿಸಿಕೊಂಡು ಪರಿಶೀಲಿಸಿ, ಕಾರ್ಯಸಾಧ್ಯತೆ **(Feasibility)** ಕಂಡುಬಂದಲ್ಲಿ, ಪ್ರಸ್ತಾವನೆಯನ್ನು ಕಂಪನಿಯ ನಿರ್ದೇಶಕರ ಮಂಡಳಿಯಲ್ಲಿ ಮರು ಮಂಡಿಸಲು ನಿರ್ಧಾರ ಕೈಗೊಳ್ಳಲಾಗುವುದು. |

ಸಂಖ್ಯೆ: ಎನರ್ಜಿ 77 ಪಿಪಿಎಂ 2020

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

149

## ಕರ್ನಾಟಕ ಸರ್ಕಾರ

**ಸಂಖ್ಯೆ:** ಇಎನ್ 72 ಪಿಪಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:23.03.2020

24/3

**ಇಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಇಂಧನ ಇಲಾಖೆ,
ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ವೆಂಕಟರಮಣಯ್ಯ ಟಿ., (ದೊಡ್ಡಬಳ್ಳಾಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **1297** ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ವೆಂಕಟರಮಣಯ್ಯ ಟಿ., (ದೊಡ್ಡಬಳ್ಳಾಪುರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **1297** ಕ್ಕೆ ಉತ್ತರಗಳ 100 ಪ್ರತಿಗಳನ್ನು ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

N. mangalagei

(ಎನ್.ಮಂಗಳಗೌರಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1297
ಸದಸ್ಯರ ಹೆಸರು : ಶ್ರೀ ವೆಂಕಟರಮಣಯ್ಯ ಟಿ., (ದೊಡ್ಡಬಳ್ಳಾಪುರ)
ಉತ್ತರಿಸಬೇಕಾದ ದಿನಾಂಕ : 24-03-2020
ಉತ್ತರಿಸುವ ಸಚಿವರು : ಮುಖ್ಯಮಂತ್ರಿ

***

| | ಪ್ರಶ್ನೆ | ಉತ್ತರ |
|---|---|---|
| ಅ) | ಬೆಂಗಳೂರು ಗ್ರಾಮಾಂತರ ಜಿಲ್ಲಾಡಳಿತ ಕಛೇರಿಯು ದೊಡ್ಡಬಳ್ಳಾಪುರ ತಾಲ್ಲೂಕಿನ ಸಮೀಪದಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಗ್ರಾಮಾಂತರ ಜಿಲ್ಲೆಯ ವಿದ್ಯುತ್ ವಿಭಾಗೀಯ ಕಛೇರಿ ಮತ್ತು ಉಗ್ರಾಣವು ಜಿಲ್ಲಾ ಕೇಂದ್ರದಿಂದ 30 ಕಿ.ಮೀ. ಅಂತರದ ನೆಲಮಂಗಲ ತಾಲ್ಲೂಕಿನಲ್ಲಿ ಕಾರ್ಯನಿರ್ವಹಿಸುತ್ತಿರುವುದರಿಂದ ರೈತರಿಗೆ, ಸಾರ್ವಜನಿಕರಿಗೆ, ಕಛೇರಿ ಕೆಲಸಗಳಿಗೆ ಅನಾನುಕೂಲವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಬೆಂಗಳೂರು ವಿದ್ಯುತ್ ಸರಬರಾಜು ಕಂಪನಿ ವ್ಯಾಪ್ತಿಯ ಬೆಂಗಳೂರು ಗ್ರಾಮೀಣ ಕ್ಷೇತ್ರ ವಲಯದ ನೆಲಮಂಗಲ ವಿಭಾಗ ಕಛೇರಿ ವ್ಯಾಪ್ತಿಗೆ ದೊಡ್ಡಬಳ್ಳಾಪುರ ಮತ್ತು ನೆಲಮಂಗಲ ತಾಲ್ಲೂಕುಗಳು ಸೇರಿರುತ್ತವೆ.<br><br>ನೆಲಮಂಗಲ ವಿಭಾಗ ಕಛೇರಿ ವ್ಯಾಪ್ತಿಗೆ ನೆಲಮಂಗಲ, ದೊಡ್ಡಬಳ್ಳಾಪುರ ನಗರ, ದೊಡ್ಡಬಳ್ಳಾಪುರ ಗ್ರಾಮೀಣ ಹಾಗೂ ದಾಬಸ್ ಪೇಟೆ ಉಪ-ವಿಭಾಗಗಳು ಒಳಗೊಂಡಿರುತ್ತವೆ.<br><br>ಒಂದು ವಿಭಾಗಕ್ಕೆ ಒಂದು ಉಗ್ರಾಣದಂತೆ, ನೆಲಮಂಗಲ ವಿಭಾಗ ಕಛೇರಿ ನೆಲಮಂಗಲ ತಾಲ್ಲೂಕಿನಲ್ಲಿರುವುದರಿಂದ ವಿಭಾಗೀಯ ಉಗ್ರಾಣವು ನೆಲಮಂಗಲದಲ್ಲಿ ಕಾರ್ಯನಿರ್ವಹಿಸುತ್ತಿರುತ್ತದೆ. ಸದರಿ ಉಗ್ರಾಣವು ರೈತರಿಗೆ ಮತ್ತು ಗ್ರಾಹಕರಿಗೆ, ಅನಾನೂಕೂಲವಾಗದ ರೀತಿಯಲ್ಲಿ ಕಾರ್ಯನಿರ್ವಹಿಸುತ್ತಿದೆ. |
| ಆ) | ಹಾಗಿದ್ದಲ್ಲಿ, ವಿದ್ಯುತ್ ವಿಭಾಗೀಯ ಕಛೇರಿ ಮತ್ತು ಉಗ್ರಾಣವನ್ನು ನೆಲಮಂಗಲದಿಂದ ದೊಡ್ಡಬಳ್ಳಾಪುರ ತಾಲ್ಲೂಕಿಗೆ ಸ್ಥಳಾಂತರಿಸಲು ಸರ್ಕಾರವು ಕೈಗೊಂಡಿರುವ ಕ್ರಮಗಳೇನು? | ನೆಲಮಂಗಲದಲ್ಲಿರುವ ವಿಭಾಗೀಯ ಕಛೇರಿ ಹಾಗೂ ಉಗ್ರಾಣವನ್ನು ಸ್ಥಳಾಂತರಿಸುವ ಬಗ್ಗೆ ಸರ್ಕಾರದ ಮುಂದೆ ಯಾವುದೇ ಪ್ರಸ್ತಾವನೆ ಇರುವುದಿಲ್ಲ. |

ಸಂಖ್ಯೆ: ಎನರ್ಜಿ 72 ಪಿಪಿಎಂ 2020

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ಸರ್ಕಾರ

50

**ಸಂಖ್ಯೆ:** ಇಎನ್ 78 ಪಿಪಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:23.03.2020

**ಇಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಇಂಧನ ಇಲಾಖೆ,
ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **2987** ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿಗಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **2987** ಕ್ಕೆ ಉತ್ತರಗಳ 100 ಪ್ರತಿಗಳನ್ನು ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

N. mangalagowri
(ಎನ್.ಮಂಗಳಗೌರಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2987
ಸದಸ್ಯರ ಹೆಸರು : ಶ್ರೀ ಕೌಜಲಗಿ ಮಹಾಂತೇಶ್ ಶಿವಾನಂದ್ (ಬೈಲಹೊಂಗಲ)
ಉತ್ತರಿಸಬೇಕಾದ ದಿನಾಂಕ : 24-03-2020
ಉತ್ತರಿಸುವ ಸಚಿವರು : ಮುಖ್ಯಮಂತ್ರಿ

***

| | ಪ್ರಶ್ನೆ | ಉತ್ತರ |
|---|---|---|
| ಅ) | ಬೆಳಗಾವಿ ಜಿಲ್ಲೆ, ಬೈಲಹೊಂಗಲ ತಾಲ್ಲೂಕಿನ ಕಡಸಗಟ್ಟಿ, ತುರಕರಶೀಗಿಹಳ್ಳಿ, ಗೋವನಕೊಪ್ಪ ಹಾಗೂ ಸುತ್ತಮುತ್ತಲಿನ ಗ್ರಾಮಗಳಿಗೆ ಸಮರ್ಪಕವಾಗಿ ವಿದ್ಯುತ್ ದೊರಕದಿರುವುದು ಸರ್ಕಾರದ ಗಮನದಲ್ಲಿದೆಯೇ; | ಬೆಳಗಾವಿ ಜಿಲ್ಲೆ, ಬೈಲಹೊಂಗಲ ತಾಲ್ಲೂಕಿನ ಕಡಸಗಟ್ಟಿ, ತುರಕರ ಶೀಗಿಹಳ್ಳಿ, ಗೋವನಕೊಪ್ಪ ಹಾಗೂ ಸುತ್ತಮುತ್ತಲಿನ ಗ್ರಾಮಗಳಿಗೆ 110 ಕೆ.ವಿ ಬೆಳವಡಿ ವಿದ್ಯುತ್ ಉಪಕೇಂದ್ರದ ಬುಡರಕಟ್ಟಿ ನಿರಂತರ ಜ್ಯೋತಿ ಮಾರ್ಗದಿಂದ ಕಡಸಗಟ್ಟಿ, ತುರಕರ ಶೀಗಿಹಳ್ಳಿ ಹಾಗೂ ಸುತ್ತಮುತ್ತಲಿನ ಗ್ರಾಮಗಳಿಗೆ ಮತ್ತು ಚಿಕ್ಕಬೆಳ್ಳಿಕಟ್ಟಿ ನಿರಂತರ ಜ್ಯೋತಿ ಮಾರ್ಗದಿಂದ ಗೋವನಕೊಪ್ಪ ಹಾಗೂ ಸುತ್ತಮುತ್ತಲಿನ ಗ್ರಾಮಗಳಿಗೆ 22 ರಿಂದ 24 ಗಂಟೆಗಳ ಕಾಲ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ.<br><br>33 ಕೆ.ವಿ ಉಡಿಕೇರಿ ವಿದ್ಯುತ್ ಉಪಕೇಂದ್ರದ ಸಿದ್ಧ ಸಮುದ್ರ ಕೃಷಿ ಮಾರ್ಗದಿಂದ ತುರಕರ ಶೀಗಿಹಳ್ಳಿ ಹಾಗೂ ಸುತ್ತಮುತ್ತಲಿನ ಗ್ರಾಮಗಳ ನೀರಾವರಿ ಪಂಪ್ ಸೆಟ್ ಗಳಿಗೆ ಹಗಲಿನ ವೇಳೆ 3 ಗಂಟೆಗಳ ಕಾಲ ಹಾಗೂ ರಾತ್ರಿಯ ವೇಳೆ 4 ಗಂಟೆಗಳ ಕಾಲ 3 ಫೇಸ್ ವಿದ್ಯುತ್ ಪೂರೈಸಲಾಗುತ್ತಿದೆ.<br>110 ಕೆ.ವಿ ಬೆಳವಡಿ ವಿದ್ಯುತ್ ಉಪಕೇಂದ್ರದ ಬಿದರಗಡ್ಡಿ ಕೃಷಿ ಫೀಡರ್ ಮೂಲಕ ಕಡಸಗಟ್ಟಿ ಹಾಗೂ ಸುತ್ತಮುತ್ತಲಿನ ಗ್ರಾಮಗಳ ನೀರಾವರಿ ಪಂಪ್ ಸೆಟ್ ಗಳಿಗೆ ಮತ್ತು ದೊಡ್ಡವಾಡ ಕೃಷಿ ಫೀಡರ್ ಮೂಲಕ ಗೋವನಕೊಪ್ಪ ಹಾಗೂ ಸುತ್ತಮುತ್ತಲಿನ ಗ್ರಾಮಗಳ ನೀರಾವರಿ ಪಂಪ್ ಸೆಟ್ ಗಳಿಗೆ ಹಗಲಿನ ವೇಳೆ 6 ಗಂಟೆಗಳ ಕಾಲ 3 ಫೇಸ್ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ.<br><br>ಮೇಲ್ಕಂಡ ಗ್ರಾಮಗಳಿಗೆ ಸಮರ್ಪಕ ವಿದ್ಯುತ್ ಪೂರೈಕೆಗಾಗಿ, ಕಡಸಗಟ್ಟಿ (ತುರಕರ ಶೀಗಿಹಳ್ಳಿ) ಗ್ರಾಮದ ಹತ್ತಿರ 110 ಕೆ.ವಿ ವಿದ್ಯುತ್ ಉಪಕೇಂದ್ರವನ್ನು ನಿರ್ಮಿಸುವ ಪ್ರಸ್ತಾವನೆಯು, ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ಮುಂದೆ ಇರುತ್ತದೆ. |

| | | |
|---|---|---|
| ಆ) | ಸದರಿ ಗ್ರಾಮಗಳಿಗೆ ಸಮರ್ಪಕವಾಗಿ ವಿದ್ಯುತ್ ಸರಬರಾಜು ಮಾಡಲು ಕಡಸಗಟ್ಟಿ ಗ್ರಾಮದ ಹತ್ತಿರ 110 ಕೆ.ವಿ. ವಿದ್ಯುತ್ ಉಪಕೇಂದ್ರ ನಿರ್ಮಿಸುವ ಸಲುವಾಗಿ 4 ಎಕರೆ ಸರ್ಕಾರಿ ಜಮೀನು ಮಂಜೂರು ಮಾಡುವ ಕುರಿತು ಪ್ರಸ್ತಾವನೆ ಸಲ್ಲಿಸಿರುವುದು ನಿಜವಲ್ಲವೇ; | ಕಂದಾಯ ಇಲಾಖೆಯಿಂದ ಇದಕ್ಕೆ ಬೇಕಾಗಿರುವ ಸರ್ಕಾರಿ ಜಮೀನು ಮಂಜೂರಾದ ನಂತರ ಕರ್ನಾಟಕ ವಿದ್ಯುತ್ ಪ್ರಸರಣ ನಿಗಮ ನಿಯಮಿತದ ವತಿಯಿಂದ ಮುಂದಿನ ಕ್ರಮ ಜರುಗಿಸಲಾಗುತ್ತದೆ. |
| ಇ) | ಹಾಗಿದ್ದಲ್ಲಿ, ಕಡಸಗಟ್ಟಿ (ತುರಕರ ಶೀಗಿಹಳ್ಳಿ) ಗ್ರಾಮದ ಹತ್ತಿರ 110 ಕೆ.ವಿ. ವಿದ್ಯುತ್ ಉಪಕೇಂದ್ರ ನಿರ್ಮಿಸಲು ಕೂಡಲೇ ಕ್ರಮ ಕೈಗೊಳ್ಳಲಾಗುವುದೇ? | |

ಸಂಖ್ಯೆ: ಎನರ್ಜಿ 78 ಪಿಪಿಎಂ 2020

ಬಿ.ಎಸ್. ಯಡಿಯೂರಪ್ಪ
(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

# ಕರ್ನಾಟಕ ಸರ್ಕಾರ

**ಸಂಖ್ಯೆ:** ಇಎನ್ 76 ಪಿಪಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:23.03.2020

64

24/3

**ಇಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಇಂಧನ ಇಲಾಖೆ,
ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಮಹದೇವ ಕೆ. (ಪಿರಿಯಾಪಟ್ಟಣ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **2870** ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಮಹದೇವ ಕೆ., (ಪಿರಿಯಾಪಟ್ಟಣ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **2870** ಕ್ಕೆ ಉತ್ತರಗಳ 100 ಪ್ರತಿಗಳನ್ನು ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

N. mangalagow

(ಎನ್.ಮಂಗಳಗೌರಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2870

ಸದಸ್ಯರ ಹೆಸರು : ಶ್ರೀ ಮಹದೇವ ಕೆ. (ಪಿರಿಯಾಪಟ್ಟಣ)

ಉತ್ತರಿಸಬೇಕಾದ ದಿನಾಂಕ : 24-03-2020

ಉತ್ತರಿಸುವ ಸಚಿವರು : ಮುಖ್ಯಮಂತ್ರಿ

***

| | ಪ್ರಶ್ನೆ | ಉತ್ತರ |
|---|---|---|
| ಅ) | ಪಿರಿಯಾಪಟ್ಟಣ ತಾಲ್ಲೂಕು ವ್ಯಾಪ್ತಿಯಲ್ಲಿ ರೈತರ – ಬೇಡಿಕೆಗೆ ತಕ್ಕಂತೆ ಟ್ರಾನ್ಸ್ ಫಾರ್ಮರ್ ಗಳನ್ನು (ಟಿ.ಸಿ.) ಸಕಾಲದಲ್ಲಿ ಪೂರೈಸಲಾಗುತ್ತಿದೆಯೇ; | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮದ ಪಿರಿಯಾಪಟ್ಟಣ ತಾಲ್ಲೂಕು ವ್ಯಾಪ್ತಿಯಲ್ಲಿ ರೈತರ ನೀರಾವರಿ ಪಂಪ್ ಸೆಟ್ ಗಳ ವಿದ್ಯುತ್ ಬೇಡಿಕೆಗೆ ತಕ್ಕಂತೆ ಹೊರೆಯನ್ನು ನಿಭಾಯಿಸಲು ಅಗತ್ಯವಿರುವಷ್ಟು ಸಂಖ್ಯೆಯ ಪರಿವರ್ತಕ ಕೇಂದ್ರಗಳನ್ನು ಸ್ಥಾಪಿಸಲಾಗಿದೆ.<br>ಅಧಿಕ ಹೊರೆಯಿದ್ದ ಅಥವಾ ತಾಂತ್ರಿಕ ಕಾರಣಗಳಿಂದ ಪರಿವರ್ತಕಗಳು ವಿಫಲಗೊಂಡಲ್ಲಿ, 72 ಗಂಟೆಗಳೊಳಗಾಗಿ ಪರಿವರ್ತಕಗಳನ್ನು ಒದಗಿಸಿ, ವಿದ್ಯುತ್ ಪೂರೈಕೆ ಮಾಡಲಾಗುತ್ತಿದೆ. |
| ಆ) | ಸದರಿ ತಾಲ್ಲೂಕು ವ್ಯಾಪ್ತಿಯಲ್ಲಿ ಅಧಿಕವಾಗಿ ಬೇಡಿಕೆ ಇರುವ 63 ಕೆ.ವಿ.ಎ. ಟಿ.ಸಿ.ಗಳನ್ನು ಸಕಾಲದಲ್ಲಿ ರೈತರಿಗೆ ಪೂರೈಕೆ ಮಾಡಲು ಸಾಧ್ಯವಾಗದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮದ ವ್ಯಾಪ್ತಿಯಲ್ಲಿ ಸಾಮಾನ್ಯವಾಗಿ 25 ಕೆ.ವಿ.ಎ ಸಾಮರ್ಥ್ಯದ ಪರಿವರ್ತಕಗಳನ್ನು ಮಾತ್ರ ರೈತರ ನೀರಾವರಿ ಪಂಪ್ ಸೆಟ್ ಗಳಿಗೆ ಅಳವಡಿಸಲಾಗುತ್ತಿದ್ದು, ಪಿರಿಯಾಪಟ್ಟಣ ತಾಲ್ಲೂಕು ವ್ಯಾಪ್ತಿಯಲ್ಲಿ ರೈತರ ನೀರಾವರಿ ಪಂಪ್ ಸೆಟ್‌ಗಳಿಗೆ ಅಧಿಕವಾಗಿ ಬೇಡಿಕೆ ಇರುವ 25 ಕೆ.ವಿ.ಎ ಸಾಮರ್ಥ್ಯದ ಪರಿವರ್ತಕಗಳನ್ನು ಬೇಡಿಕೆಯನುಸಾರ ಸರಬರಾಜು ಮಾಡಲಾಗುತ್ತಿದೆ. 63 ಕೆ.ವಿ.ಎ ಸಾಮರ್ಥ್ಯದ ಪರಿವರ್ತಕಗಳನ್ನು ಸರ್ವೀಸ್ ಕನೆಕ್ಷನ್ ಕೆಲಸಗಳಿಗೆ ಮಾತ್ರ ಬಳಸಲಾಗುತ್ತಿದೆ. |
| ಇ) | ಈ ಕ್ಷೇತ್ರದಲ್ಲಿ ಅಧಿಕವಾಗಿ ಪಂಪ್ ಸೆಟ್ ಗಳನ್ನು ರೈತರು ಬಳಸುತ್ತಿರುವುದರಿಂದ ಟಿ.ಸಿ. ಬೇಡಿಕೆಯು ಜಾಸ್ತಿ ಇದ್ದು ಸಕಾಲದಲ್ಲಿ ಟಿ.ಸಿ. ಗಳನ್ನು ರೈತರಿಗೆ ಪೂರೈಕೆ ಮಾಡದಿದ್ದಲ್ಲಿ ಅವರುಗಳು ಚಳುವಳಿಯ ಹಾದಿ ಹಿಡಿಯುತ್ತಾರೆಂಬುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ವಿತರಣಾ ಪರಿವರ್ತಕಗಳ ಅವಶ್ಯಕತೆಯನ್ನು ಪೂರೈಸಲು M/s. KAVIKA, M/s. Andrew & Yule, M/s. KEL ಮತ್ತು M/s. NGEF(Hubli) ಸಂಸ್ಥೆಗಳಿಂದ ಟೆಂಡರ್ ಪ್ರಕ್ರಿಯೆ ಇಲ್ಲದೇ, ನೇರವಾಗಿ ಖರೀದಿಸಲು ಕೆ.ಟಿ.ಪಿ.ಪಿ ಕಾಯ್ದೆಯಡಿ ವಿನಾಯಿತಿ ನೀಡಲಾಗಿದೆ. ಇದಲ್ಲದೇ, ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮದಲ್ಲಿ ಇತ್ತೀಚೆಗೆ ಹೆಚ್ಚುವರಿ ಬೇಡಿಕೆಯಿರುವ 400 ಪರಿವರ್ತಕಗಳನ್ನು M/s. KAVIKA ಅಥವಾ M/s. NGEF (Hubli) ಸಂಸ್ಥೆಯವರಿಂದ ಖರೀದಿಸಲು ಅನುಮೋದನೆ ನೀಡಲಾಗಿದೆ. |
| ಈ) | ರೈತರ ಬೆಳೆ ಹಾಳಾಗುವುದನ್ನು ತಪ್ಪಿಸಲು ಸಕಾಲದಲ್ಲಿ 63 ಕೆ.ವಿ. ಟಿ.ಸಿ. ಒದಗಿಸಲು ಸರ್ಕಾರ ಯಾವ ಕ್ರಮ ತೆಗೆದುಕೊಳ್ಳುವುದು? (ವಿವರ ನೀಡುವುದು) | |

ಸಂಖ್ಯೆ: ಎನರ್ಜಿ 76 ಪಿಪಿಎಂ 2020

(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿ

ಕರ್ನಾಟಕ ಸರ್ಕಾರ

**ಸಂಖ್ಯೆ:** ಇಎನ್ 70 ಪಿಪಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:23.03.2020

24/3/2020

**ಇಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಇಂಧನ ಇಲಾಖೆ,
ಬೆಂಗಳೂರು.

**ಇವರಿಗೆ:**
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಹರ್ಷವರ್ಧನ್ ಬಿ (ನಂಜನಗೂಡು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **859** ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಹರ್ಷವರ್ಧನ್ ಬಿ (ನಂಜನಗೂಡು) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **859** ಕ್ಕೆ ಉತ್ತರಗಳ 100 ಪ್ರತಿಗಳನ್ನು ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

N. mangalagowri
(ಎನ್.ಮಂಗಳಗೌರಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : **859**

ಸದಸ್ಯರ ಹೆಸರು : ಶ್ರೀ ಹರ್ಷವರ್ಧನ್ ಬಿ (ನಂಜನಗೂಡು)

ಉತ್ತರಿಸಬೇಕಾದ ದಿನಾಂಕ : 24-03-2020

ಉತ್ತರಿಸುವ ಸಚಿವರು : ಮುಖ್ಯಮಂತ್ರಿ

***

| | ಪ್ರಶ್ನೆ | ಉತ್ತರ |
|---|---|---|
| ಅ) | ನಂಜನಗೂಡು ತಾಲ್ಲೂಕಿನಲ್ಲಿ ಎಷ್ಟು ಕೈಗಾರಿಕೆಗಳು ವಿದ್ಯುತ್ ಬಿಲ್‌ಗಳನ್ನು ಬಾಕಿ ಉಳಿಸಿಕೊಂಡಿವೆ; ಬಾಕಿ ಉಳಿಸಿಕೊಂಡಿರುವ ಕೈಗಾರಿಕೆಗಳ ವಿರುದ್ಧ ತೆಗೆದುಕೊಳ್ಳಲಾಗಿರುವ ಕ್ರಮಗಳೇನು; | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ ವ್ಯಾಪ್ತಿಯ ನಂಜನಗೂಡು ತಾಲ್ಲೂಕಿನಲ್ಲಿ ಫೆಬ್ರವರಿ–2020ರ ಅಂತ್ಯಕ್ಕೆ 18 ಸಂಖ್ಯೆ ಕೈಗಾರಿಕಾ ಸ್ಥಾವರಗಳು ವಿದ್ಯುತ್ ಬಿಲ್‌ಗಳನ್ನು ಬಾಕಿ ಉಳಿಸಿಕೊಂಡಿವೆ. ಬಾಕಿ ಉಳಿಸಿಕೊಂಡಿರುವ ಕೈಗಾರಿಕೆಗಳ ವಿರುದ್ಧ ತೆಗೆದುಕೊಳ್ಳಲಾಗಿರುವ ಕ್ರಮದ ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |
| ಆ) | ಭಾಗ್ಯ ಜ್ಯೋತಿ ಮತ್ತು ಕುಟೀರ ಜ್ಯೋತಿ ಯೋಜನೆಯಡಿ ನಂಜನಗೂಡು ತಾಲ್ಲೂಕಿನಲ್ಲಿ ಇರುವ ಫಲಾನುಭವಿಗಳು ಎಷ್ಟು; | ನಂಜನಗೂಡು ತಾಲ್ಲೂಕಿನಲ್ಲಿ ಭಾಗ್ಯ ಜ್ಯೋತಿ ಮತ್ತು ಕುಟೀರ ಜ್ಯೋತಿ ಯೋಜನೆಯಡಿ ಫೆಬ್ರವರಿ–2020ರ ಅಂತ್ಯಕ್ಕೆ ಇರುವ ಫಲಾನುಭವಿಗಳ ಒಟ್ಟು ಸಂಖ್ಯೆ **33,512**. |
| ಇ) | ಈ ಯೋಜನೆಯಲ್ಲಿ ಯಾವುದೇ ಅಡಚಣೆ ಇಲ್ಲದೆ ಇದುವರೆವಿಗೂ ವಿದ್ಯುತ್ ಉಪಯೋಗಿಸುತ್ತಿರುವ ಫಲಾನುಭವಿಗಳು ಎಷ್ಟು; | ಎಲ್ಲಾ **33,512** ಫಲಾನುಭವಿಗಳು ಭಾಗ್ಯಜ್ಯೋತಿ ಮತ್ತು ಕುಟೀರ ಜ್ಯೋತಿ ಯೋಜನೆಯಡಿ ಯಾವುದೇ ಅಡಚಣೆ ಇಲ್ಲದೆ ವಿದ್ಯುತ್ ಉಪಯೋಗಿಸುತ್ತಿರುತ್ತಾರೆ. |
| ಈ) | ಇದುವರೆವಿಗೂ ವಿದ್ಯುತ್ ಕಡಿತಗೊಳಿಸಿರುವ ಪ್ರಕರಣಗಳು ಎಷ್ಟು; | ನಂಜನಗೂಡು ತಾಲ್ಲೂಕಿನಲ್ಲಿ ಭಾಗ್ಯಜ್ಯೋತಿ/ಕುಟೀರ ಜ್ಯೋತಿ ಸ್ಥಾವರಗಳ ಯಾವುದೇ ಫಲಾನುಭವಿಗಳಿಗೆ ವಿದ್ಯುತ್ ಸಂಪರ್ಕ ಕಡಿತ ಮಾಡಿರುವುದಿಲ್ಲ. |
| ಉ) | ಸದರಿ ಫಲಾನುಭವಿಗಳಿಗೆ ವಿದ್ಯುತ್ ಸಂಪರ್ಕ ಕಡಿತಗೊಳಿಸಲು ಕಾರಣಗಳೇನು? | |

ಸಂಖ್ಯೆ: ಎನರ್ಜಿ 70 ಪಿಪಿಎಂ 2020

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿ

ಮಾನ್ಯ

ನಂಜನಗೂಡು

| ಕ್ರ.ಸಂ | ಆರ್.ಆರ್.ಸಂಖ್ಯೆ | |
|---|---|---|
| 1 | EHTR-3 | ಮೆ॥ ರೀ |
| 2 | EHTR-2 | ಮೈ॥ ಖಿಯ |
| 3 | NP-1154 | ಶ್ರೀ ಡಿ. ಶಂ |
| 4 | HTR-89 | ಮೆ॥ ಮಲಿಹಾ |
| 5 | NP- 977 | ಶ್ರೀ ಎನ್.ಸೋ<br>ತಾಂಡವಪುರ |
| 6 | N2P-2602 | ಶ್ರೀ ಸುರೇಶ್ ಕು<br>ಕೈಗಾರಿಕಾ ಪ್ರದೇ |
| 7 | SDP-1 | ಶ್ರೀ ಕೆಂಪಣ್ಣ, ನಂ |
| 8 | NIP-2459 | ಶ್ರೀ ನಂಜಪ್ಪ ಕುಂ |
| 9 | NP-1008 | ಘೌಸಿಯಾ ರೈಸ್ ಮಿಲ್, ದೇಬೂ |
| 10 | N2P-2555 | ಶ್ರೀಮತಿ ಪ್ರಮಿಳಾ ಕೋಂ ಟಿ.ಜೆ.<br>ಹೊಸಕೋಟೆ ಗ್ರಾಮ |
| 11 | GDPR-3 | ಶ್ರೀ ಶಿವಯ್ಯ, ಗಟ್ಟವಾಡಿ ಪುರ, |
| 12 | NS2TP-302 | ಶ್ರೀಮತಿ ಸಂಗೀತ ಕುಮಾರಿ ಕೋ<br>ತಗಡೂರು |
| 13 | NS2HP-533 | ಶ್ರೀ ಕರುಣಾಕರಭಟ್ಟ ಬಿನ್ ವೆಂಕ<br>ಹುಲ್ಲಹಳ್ಳಿ |
| 14 | NHP-1734 | ಶ್ರೀ ಕೆಂಪನಾಯಕ, ಬಿದರಗೂಡು |
| 15 | NP-195 | ಶ್ರೀ ಬಿ.ಎಂ. ಮಹದೇವಪ್ಪ, ಬದ |
| 16 | NS2HP-584 | ಶ್ರೀ ಸಯೀದ್ ಶಕೀಲ್ ಅಹಮ್ಮದ<br>ಅಹಮ್ಮದ್, ಹುಲ್ಲಹಳ್ಳಿ |
| 17 | NS2HP-234 | ಶ್ರೀ ಅನ್ಸಾರ್ ಅಹಮ್ಮದ್ ಬಿನ್ ರ<br>ಕುರಿಹುಂಡಿ ಗ್ರಾಮ |
| 18 | HAPR-2 | ಶ್ರೀ ಎಚ್.ಎಸ್. ಮಹಾದ್ ಜಮ<br>ಗ್ರಾಮಾಂತರ ಹರದನಹಳ್ಳಿ |

| | | |
|---|---|---|
| ು ಗ್ರಾಮ | 1,08,011.00 | ವಿದ್ಯುತ್ ಸಂಪರ್ಕ ಕಡಿತಗೊಳಿಸಲಾಗಿರುತ್ತದೆ. |
| ಾಗೇಂದ್ರ ಪ್ರಸಾದ್, | 10229.00 | ವಿದ್ಯುತ್ ಸಂಪರ್ಕ ಕಡಿತಗೊಳಿಸಲಾಗಿರುತ್ತದೆ. |
| ಂಜನಗೂಡು | 21867.00 | ವಿದ್ಯುತ್ ಸಂಪರ್ಕ ಕಡಿತಗೊಳಿಸಲಾಗಿರುತ್ತದೆ. |
| ಲೇಟ್ ಬಸವನಾಯಕ | 9642.00 | ವಿದ್ಯುತ್ ಸಂಪರ್ಕ ಕಡಿತಗೊಳಿಸಲಾಗಿರುತ್ತದೆ. |
| ರಮಣಾಭಟ್ಟ, | 19586.00 | ವಿದ್ಯುತ್ ಸಂಪರ್ಕ ಕಡಿತಗೊಳಿಸಲಾಗಿರುತ್ತದೆ. |
| ್ರಾಮ | 6083.00 | ವಿದ್ಯುತ್ ಸಂಪರ್ಕ ಕಡಿತಗೊಳಿಸಲಾಗಿರುತ್ತದೆ. |
| ೂಡು ಗ್ರಾಮ | 18543.00 | ವಿದ್ಯುತ್ ಸಂಪರ್ಕ ಕಡಿತಗೊಳಿಸಲಾಗಿರುತ್ತದೆ. |
| ಬನ್ ಲೇಟ್ | 5191.00 | ವಿದ್ಯುತ್ ಸಂಪರ್ಕ ಕಡಿತಗೊಳಿಸಲಾಗಿರುತ್ತದೆ. |
| ದ್ ಅಹಮ್ಮದ್, | 16839.00 | ವಿದ್ಯುತ್ ಸಂಪರ್ಕ ಕಡಿತಗೊಳಿಸಲಾಗಿರುತ್ತದೆ. |
| ನಂಜನಗೂಡು | 6825.00 | ವಿದ್ಯುತ್ ಸಂಪರ್ಕ ಕಡಿತಗೊಳಿಸಲಾಗಿರುತ್ತದೆ. |

## ಕರ್ನಾಟಕ ಸರ್ಕಾರ

**ಸಂಖ್ಯೆ:** ಇಎನ್ 74 ಪಿಪಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:23.03.2020

**ಇಂದ:**
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಇಂಧನ ಇಲಾಖೆ,
ಬೆಂಗಳೂರು.

**ಇವರಿಗೆ:**

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ನಿಂಬಣ್ಣನವರ್ ಸಿ.ಎಂ (ಕಲಘಟಗಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **1817** ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ನಿಂಬಣ್ಣನವರ್ ಸಿ.ಎಂ (ಕಲಘಟಗಿ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: **1817** ಉತ್ತರಗಳ 100 ಪ್ರತಿಗಳನ್ನು ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

N. mangalagau

(ಎನ್.ಮಂಗಳಗೌರಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

ಕರ್ನಾಟಕ ವಿಧಾನಸಭೆ



| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 1817 |
| ಸದಸ್ಯರ ಹೆಸರು | : | ಶ್ರೀ ನಿಂಬಣ್ಣನವರ್ ಸಿ.ಎಂ (ಕಲಘಟಗಿ) |
| ಉತ್ತರಿಸಬೇಕಾದ ದಿನಾಂಕ | : | 24-03-2020 |
| ಉತ್ತರಿಸುವ ಸಚಿವರು | : | ಮುಖ್ಯಮಂತ್ರಿ |

***

| | ಪ್ರಶ್ನೆ | ಉತ್ತರ |
|---|---|---|
| ಅ) | ಕಲಘಟಗಿ ತಾಲ್ಲೂಕು ಜೆನ್ನೂರು ಮತ್ತು ದೇವರಕೊಂಡ್ರ ಗ್ರಾಮಗಳ ನೂರಾರು ಎಕರೆ ಜಮೀನಿನಲ್ಲಿ ಸೋಲಾರ್ ಪಾರ್ಕ್ ಸ್ಥಾಪಿಸುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಕಲಘಟಗಿ ತಾಲ್ಲೂಕು ಜೆನ್ನೂರು ಮತ್ತು ದೇವರಕೊಂಡ ಗ್ರಾಮದಲ್ಲಿ ಸೋಲಾರ್ ಪಾರ್ಕ್ ಸ್ಥಾಪಿಸುತ್ತಿರುವುದಿಲ್ಲ. ಆದರೆ, ತಲಾ 20ಮೆ.ವ್ಯಾ ಗಳಂತೆ 43 ತಾಲ್ಲೂಕು/ಮತಕ್ಷೇತ್ರಗಳಲ್ಲಿ 860 ಮೆ.ವ್ಯಾ ಸಾಮರ್ಥ್ಯದ ಯೋಜನೆಗಳನ್ನು ಅನುಷ್ಠಾನಗೊಳಿಸುವ ಟೆಂಡರ್‌ನಡಿ ಧಾರವಾಡ ಜಿಲ್ಲೆಯ ಕಲಘಟಗಿ ತಾಲ್ಲೂಕಿನಲ್ಲಿ 20 ಮೆ.ವ್ಯಾ ಸಾಮರ್ಥ್ಯದ ಯೋಜನೆಯನ್ನು ಹಂಚಿಕೆ ಮಾಡಲಾಗಿದೆ. |
| ಆ) | ಬಂದಿದ್ದಲ್ಲಿ, ಈ ಯೋಜನೆಯ ಅಂದಾಜು ವೆಚ್ಚ ಎಷ್ಟು ಹಾಗೂ ಇದರ ನಿರ್ಮಾಣ ಕಾಮಗಾರಿಯ ಸಂಪೂರ್ಣ ವಿವರ ನೀಡುವುದು; | ಕರ್ನಾಟಕ ವಿದ್ಯುಚ್ಛಕ್ತಿ ನಿಯಂತ್ರಣ ಆಯೋಗರವರ ಪ್ರಸ್ತುತ ಚಾಲ್ತಿಯಲ್ಲಿರುವ ಆದೇಶದಂತೆ ಪ್ರತಿ ಮೆ.ವ್ಯಾನ ವೆಚ್ಚ ರೂ 3.4 ಕೋಟಿಗಳು ಆಗಿದ್ದು, 20 ಮೆ.ವ್ಯಾ ಸಾಮರ್ಥ್ಯದ ಯೋಜನೆಗೆ ಅಂದಾಜು ರೂ. 68 ಕೋಟಿ ಬಂಡವಾಳ ವೆಚ್ಚವಾಗುತ್ತದೆ.<br>ಯೋಜನೆಯನ್ನು ತಮ್ಮ ಸ್ವಂತ ವೆಚ್ಚದಲ್ಲಿ ಅನುಷ್ಠಾನಗೊಳಿಸುವ ಜವಾಬ್ದಾರಿಯು ಅಭಿವೃದ್ಧಿದಾರರದ್ದೇ ಆಗಿದ್ದು, ಇದಕ್ಕೆ ಸರ್ಕಾರದಿಂದ ಯಾವುದೇ ಅನುದಾನ ಒದಗಿಸುವುದಿಲ್ಲ. |
| ಇ) | ಜೆನ್ನೂರು ಗ್ರಾಮದಲ್ಲಿ ಸೋಲಾರ್ ಪಾರ್ಕ್ ನಿರ್ಮಾಣ ಕಾಮಗಾರಿಯನ್ನು ಅನುಷ್ಠಾನಗೊಳಿಸುತ್ತಿರುವ ಇಲಾಖೆ/ ಏಜೆನ್ಸಿ ಯಾವುದು; | 20 ಮೆ.ವ್ಯಾ ಸಾಮರ್ಥ್ಯದ ಯೋಜನೆಯನ್ನು ಮೆ॥ ರಿನ್ಯೂವ್ ಸೋಲಾರ್ ಪವರ್ ಪ್ರೈ. ಲಿ., ರವರಿಗೆ ಹಂಚಿಕೆ ಮಾಡಲಾಗಿದೆ. |
| ಈ) | ಸದರಿ ಕಾಮಗಾರಿಯನ್ನು ಯಾವಾಗ ಪ್ರಾರಂಭಿಸಲಾಗುವುದು? | ಸದರಿ ಯೋಜನೆಯು ದಿನಾಂಕ 11.11.2019 ರಂದು ಅನುಷ್ಠಾನಗೊಂಡಿರುತ್ತದೆ. |
| ಉ) | ಈ ಕಾಮಗಾರಿಯನ್ನು ಪ್ರಾರಂಭಿಸುವ ಪೂರ್ವದಲ್ಲಿ ಸಂಬಂಧಿಸಿದ ವಿಧಾನಸಭಾ ಸದಸ್ಯರಿಗೆ ಆಹ್ವಾನ ನೀಡಲಾಗಿತ್ತೆ; ಶಿಷ್ಟಾಚಾರ ಪಾಲಿಸಲಾಗಿದೆಯೇ; ಪಾಲಿಸದಿದ್ದಲ್ಲಿ ಸಂಬಂಧಪಟ್ಟ ಅಧಿಕಾರಿಗಳ ವಿರುದ್ಧ ಯಾವ ಕ್ರಮ ಕೈಗೊಳ್ಳಲಾಗಿದೆ; | ಯೋಜನೆಗೆ ಬೇಕಾದ ಜಮೀನು ಖರೀದಿ/ಗುತ್ತಿಗೆ ಪಡೆಯುವುದು, ಕೆ.ಪಿ.ಟಿ.ಸಿ.ಎಲ್ ನಿಂದ Power Evacuation ಪಡೆಯುವುದು ಮತ್ತು ಸಂಬಂಧಪಟ್ಟ ಎಲ್ಲಾ ಇಲಾಖೆಗಳಿಂದ ನಿರಾಕ್ಷೇಪಣೆ ಪಡೆಯುವುದು ಹಂಚಿಕೆ ಪಡೆದ ಅಭಿವೃದ್ಧಿದಾರರ ಜವಾಬ್ದಾರಿಯಾಗಿದ್ದು, ಹಂಚಿಕೆಯಾದ ಸೌರ ಘಟಕಗಳನ್ನು ಅಭಿವೃದ್ಧಿದಾರರೇ ಸಂಪೂರ್ಣ ವೆಚ್ಚ ಭರಿಸಿ ಅನುಷ್ಠಾನಗೊಳಿಸಬೇಕಿದ್ದು, ಸರ್ಕಾರದಿಂದ ಸದರಿ ಯೋಜನೆ ಅನುಷ್ಠಾನಕ್ಕೆ ಯಾವುದೇ ಅನುದಾನ ಒದಗಿಸಿರುವುದಿಲ್ಲ. ಹಾಗಾಗಿ ಅಧಿಕಾರಿಗಳಿಂದ ಶಿಷ್ಟಾಚಾರ ಉಲ್ಲಂಘನೆ ಆಗಿರುವುದಿಲ್ಲ. |
| ಊ) | ಇಲ್ಲದಿದ್ದಲ್ಲಿ, ಶಿಷ್ಟಾಚಾರ ಉಲ್ಲಂಘಿಸಿದ ಅಧಿಕಾರಿಯ ವಿರುದ್ಧ ಯಾವ ಕ್ರಮ ಕೈಗೊಂಡಿದೆ? | |

ಸಂಖ್ಯೆ: ಎನರ್ಜಿ 74 ಪಿಪಿಎಂ 2020

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿ



**ಕರ್ನಾಟಕ ಸರ್ಕಾರ**

ಸಂಖ್ಯೆ: ಸಿಆಸುಇ 03 ಎಸ್‌ಎಲ್‌ಎ 2020.

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ,
ಬೆಂಗಳೂರು, ದಿನಾಂಕ: 19.05.2020.

**ಇವರಿಂದ,**
ಸರ್ಕಾರದ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ,
ವಿಧಾನಸೌಧ,
ಬೆಂಗಳೂರು.

**ಇವರಿಗೆ,**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ,
ವಿಧಾನಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:** ಮಾನ್ಯ ವಿಧಾನ ಸಭಾ ಸದಸ್ಯರಾದ ಡಾ|| ಕೆ.ಅನ್ನದಾನಿ, ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2483ಗೆ ಉತ್ತರ ಒದಗಿಸುವ ಬಗ್ಗೆ.

**ಉಲ್ಲೇಖ:** ಪತ್ರಸಂಖ್ಯೆ:ಪ್ರಶಾವಿಸ/15ನೇವಿಸ/6ಅ/ಪ್ರಸಂ2483/2020; ದಿ:09.03.2020.

* * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭಾ ಸದಸ್ಯರಾದ ಡಾ|| ಕೆ.ಅನ್ನದಾನಿ, ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2483ರ ಉತ್ತರದ 10 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ನಂಬುಗೆಯ,

19/5/2020

(ಎಂ. ಉಮೇಶ್ ಶಾಸ್ತ್ರಿ)
ಸರ್ಕಾರದ ಅಧೀನ ಕಾರ್ಯದರ್ಶಿ,
ಸಿಬ್ಬಂದಿ ಮತ್ತು ಆಡಳಿತ ಸುಧಾರಣೆ ಇಲಾಖೆ
(ಸೇವೆಗಳು-7).

# ಕರ್ನಾಟಕ ವಿಧಾನ ಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2483.
ಸದಸ್ಯರ ಹೆಸರು : ಶ್ರೀ. ಡಾ॥ ಕೆ. ಅನ್ನದಾನಿ(ಮಳವಳ್ಳಿ)
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು.
ಉತ್ತರಿಸಬೇಕಾದ ದಿನಾಂಕ : 24-03-2020.

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| (ಅ) | ಕರ್ನಾಟಕ ರಾಜ್ಯದ ಲೋಕಸೇವಾ ಆಯೋಗದಿಂದ 150 ಮೋಟಾರ್ ವಾಹನ ನಿರೀಕ್ಷಕರ ಹುದ್ದೆಗಳಿಗೆ 2016ನೇ ಸಾಲಿನಲ್ಲಿ ನೇಮಕಾತಿ ಪ್ರಕಟಣೆ ಹೊರಡಿಸಿರುವುದು ನಿಜವೇ (ಸಂಪೂರ್ಣ ಮಾಹಿತಿ ನೀಡುವುದು); | ಹೌದು. ಆಯೋಗದ ಅಧಿಸೂಚನೆ ಸಂಖ್ಯೆ: ಆರ್(2) 131/2015/16/ಪಿಎಸ್‌ಸಿ, ದಿ: 04.02.2016ರನ್ವಯ 150 ಮೋಟಾರ್ ವಾಹನ ನಿರೀಕ್ಷಕರ ಹುದ್ದೆಗಳಿಗೆ ಅಧಿಸೂಚನೆಯನ್ನು ಹೊರಡಿಸಲಾಗಿದೆ; ಸಂಪೂರ್ಣ ಮಾಹಿತಿಯನ್ನು ಅನುಬಂಡ-1ರಲ್ಲಿ ನೀಡಲಾಗಿದೆ. |
| (ಆ) | ಕರ್ನಾಟಕ ರಾಜ್ಯದ ಲೋಕಸೇವಾ ಆಯೋಗದಿಂದ 150 ಮೋಟಾರ್ ವಾಹನ ನಿರೀಕ್ಷಕರ ಹುದ್ದೆಗೆ 2016ನೇ ಸಾಲಿನಲ್ಲಿ ನಡೆದ ನೇಮಕಾತಿಯಲ್ಲಿ ಅರ್ಜಿ ಸಲ್ಲಿಸಿದ ಅಭ್ಯರ್ಥಿಗಳಲ್ಲಿ ಕೆಲವು ಅನರ್ಹಗೊಂಡಿರುವ ಅಭ್ಯರ್ಥಿಗಳು ಸಹ 150 ಮೋಟಾರ್ ವಾಹನ ನಿರೀಕ್ಷಕರ ಆಯ್ಕೆ ಪಟ್ಟಿಯಲ್ಲಿರುವುದು ನಿಜವೇ (ಮೋಟಾರ್ ವಾಹನ ನಿರೀಕ್ಷಕರಾಗಿ ಆಯ್ಕೆಯಾಗಿರುವ ಅಭ್ಯರ್ಥಿಗಳ ಹೆಸರು, ವಿಳಾಸ ಸಹಿತ ಸಂಪೂರ್ಣ ಮಾಹಿತಿ ನೀಡುವುದು); | ಕರ್ನಾಟಕ ಲೋಕಸೇವಾ ಆಯೋಗವು ಈ ಕೆಳಕಂಡಂತೆ ವರದಿ ನೀಡಿರುತ್ತದೆ:-<br>ಇಲ್ಲ. 2016ನೇ ಸಾಲಿನ ಮೋಟಾರ್ ವಾಹನ ನಿರೀಕ್ಷಕರ 150 ಹುದ್ದೆಗಳಿಗೆ ಅಭ್ಯರ್ಥಿಗಳು ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪಡೆದ ಅಂಕಗಳ ಜೇಷ್ಠತೆ, ಕೋರಿರುವ ಮೀಸಲಾತಿಯಂತೆ ಅರ್ಹ ಅಭ್ಯರ್ಥಿಗಳಿಗೆ ವೈದ್ಯಕೀಯ ಮಂಡಳಿಯಿಂದ ನಡೆಸಲಾದ ದೇಹ ದಾರ್ಢ್ಯತಾ ಪರೀಕ್ಷೆ ಹಾಗೂ ಅಭ್ಯರ್ಥಿಗಳ ಸೇವಾನುಭವ ಪ್ರಮಾಣ ಪತ್ರ ಮತ್ತು ಸಾರಿಗೆ ವಾಹನ ಪರವಾನಗಿ ಪ್ರಮಾಣ ಪತ್ರಗಳನ್ನು ಸಾರಿಗೆ ಇಲಾಖೆ ಮತ್ತು ಜಿಲ್ಲಾಧಿಕಾರಿಗಳ ಕಛೇರಿಯ ಅಧಿಕಾರಿಗಳು ನೀಡಿದ ಜಂಟಿ ವರದಿಗಳ ಆಧಾರದ ಮೇಲೆ ತಾತ್ಕಾಲಿಕ ಆಯ್ಕೆ ಪಟ್ಟಿಯನ್ನು ಪ್ರಕಟಪಡಿಸಲಾಗಿದೆ.<br>ತಾತ್ಕಾಲಿಕ ಆಯ್ಕೆ ಪಟ್ಟಿಯಲ್ಲಿ ಮೋಟಾರ್ ವಾಹನ ನಿರೀಕ್ಷಕರಾಗಿ ಆಯ್ಕೆಯಾಗಿರುವ ಅಭ್ಯರ್ಥಿಗಳ ಹೆಸರು, ವಿಳಾಸ ಸಹಿತ ಸಂಪೂರ್ಣ ಮಾಹಿತಿಯನ್ನು ಅನುಬಂಧ-2ರಲ್ಲಿ ನೀಡಲಾಗಿದೆ. |

...2..

| | | |
|---|---|---|
| (ಇ) | ಲೋಕಸೇವಾ ಆಯೋಗದ ಕೆಲವು ಅಧಿಕಾರಿಗಳು ಮತ್ತು ಸಾರಿಗೆ ಇಲಾಖೆಯ ಅಧಿಕಾರಿಗಳು ಶಾಮೀಲಾಗಿ 150 ಮೋಟಾರ್ ವಾಹನ ನಿರೀಕ್ಷಕರ ತಾತ್ಕಾಲಿಕ ಆಯ್ಕೆ ಪಟ್ಟಿಯಲ್ಲಿರುವ ಅಭ್ಯರ್ಥಿಗಳಲ್ಲಿ ಬಹುತೇಕ ಅನರ್ಹತೆ ಹೊಂದಿರುವ ಹಾಗೂ ನಕಲಿ ದಾಖಲಾತಿಗಳನ್ನು ಸಲ್ಲಿಸಿರುವವರಾಗಿದ್ದು ಅವರುಗಳು ನಕಲಿ ದಾಖಲೆಗಳನ್ನು ಜಿಲ್ಲಾಧಿಕಾರಿಗಳು ಹಾಗೂ ಸಾರಿಗೆ ಇಲಾಖೆಯ ಅಧಿಕಾರಿಗಳು ನೀಡಿರುವ ವರದಿಯು ಸರಿ ಇರುವುದಿಲ್ಲವೆಂದು ಈಗಾಗಲೇ ಸುಮಾರು 67 ನೊಂದ ಅಭ್ಯರ್ಥಿಗಳು ದಾವೆ ಹೂಡಿದ್ದು, ಲೋಕಸೇವಾ ಆಯೋಗಕ್ಕೆ ಸುಮಾರು 800 ಅಭ್ಯರ್ಥಿಗಳು ದೂರು ಅರ್ಜಿ ಸಲ್ಲಿಸಿದ್ದರೂ ಲೋಕಸೇವಾ ಆಯೋಗದ ಪ್ರಭಾವಿ ವ್ಯಕ್ತಿಗಳು ಕೆಲವು ನಕಲಿ ದಾಖಲೆ ಹೊಂದಿರುವ ಅಭ್ಯರ್ಥಿಗಳನ್ನು ಮೋಟಾರ್ ವಾಹನ ನಿರೀಕ್ಷಕರ ಹುದ್ದೆಗೆ ತಾತ್ಕಾಲಿಕ ಆಯ್ಕೆ ಪಟ್ಟಿಯಲ್ಲಿ ಸೇರಿಸಿ ಪಟ್ಟಿ ಬಿಡುಗಡೆ ಮಾಡಿರುವುದು ನಿಜವೇ (ಸಂಪೂರ್ಣ ಮಾಹಿತಿ ನೀಡುವುದು)? | ನಿಜವಲ್ಲವೆಂದು ಕರ್ನಾಟಕ ಲೋಕಸೇವಾ ಆಯೋಗವು ವರದಿ ಮಾಡಿರುತ್ತದೆ. |

**ಸಂಖ್ಯೆ: ಸಿಆಸುಇ/03/ಎಸ್‌ಎಲ್‌ಎ/2020**

ಬಿ.ಎಸ್. ಯಡಿಯೂರಪ್ಪ
(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ

ಅನುಬಂಧ-1



ಕರ್ನಾಟಕ ಲೋಕ ಸೇವಾ ಆಯೋಗ, ಉದ್ಯೋಗ ಸೌಧ, ಬೆಂಗಳೂರು-560 001

ಅಧಿಸೂಚನೆ

ಸಂಖ್ಯೆ: ಆರ್(2)131 /2015-16/ಪಿಎಸ್‌ಸಿ ದಿನಾಂಕ: 04-02-2016

1. ಆಯೋಗವು ಸಾರಿಗೆ ಇಲಾಖೆಯಲ್ಲಿನ ಗ್ರೂಪ್ "ಎ" ವೃಂದದ ಪ್ರಾದೇಶಿಕ ಸಾರಿಗೆ ಅಧಿಕಾರಿ ಮತ್ತು ಗ್ರೂಪ್ "ಸಿ" ವೃಂದದ ಮೋಟಾರು ವಾಹನ ನಿರೀಕ್ಷಕರ ಹುದ್ದೆಗಳನ್ನು ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ಲೋಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಹಾಗೂ ಆಯ್ಕೆ)(ಸಾಮಾನ್ಯ) ನಿಯಮಗಳು 2006 ಮತ್ತು 2015ರ ತಿದ್ದುಪಡಿ ನಿಯಮಗಳನ್ವಯ ಭರ್ತಿ ಮಾಡಲು ಆನ್ ಲೈನ್ ಮೂಲಕ ಅರ್ಹ ಅಭ್ಯರ್ಥಿಗಳಿಂದ ಅರ್ಜಿಗಳನ್ನು ಆಹ್ವಾನಿಸಿದೆ.

| ಕ್ರಮ ಸಂಖ್ಯೆ | ಹುದ್ದೆಯ ಪದನಾಮ | ಹುದ್ದೆಗಳ ಸಂಖ್ಯೆ | | ಒಟ್ಟು ಹುದ್ದೆಗಳ ಸಂಖ್ಯೆ |
|---|---|---|---|---|
| | | ರಾಜ್ಯ ವೃಂದದ ಹುದ್ದೆಗಳು | ಹೈದರಾಬಾದ್ - ಕರ್ನಾಟಕ ಹುದ್ದೆಗಳು | |
| | ಗ್ರೂಪ್-'ಎ' ಹುದ್ದೆಗಳು | | | |
| 01 | ಪ್ರಾದೇಶಿಕ ಸಾರಿಗೆ ಅಧಿಕಾರಿ | 09 | 02 | 11 |
| | ಗ್ರೂಪ್-'ಸಿ' ಹುದ್ದೆಗಳು | | | |
| 02 | ಸಾರಿಗೆ ಇಲಾಖೆಯಲ್ಲಿನ ಮೋಟಾರು ವಾಹನ ನಿರೀಕ್ಷಕರು | 127 | 23 | 150 |

ಟಿಪ್ಪಣಿ: ಅನುಸೂಚಿಯಲ್ಲಿ ತಿಳಿಸಿರುವ ಹುದ್ದೆಗಳ ಸಂಖ್ಯೆ ಮತ್ತು ವರ್ಗೀಕರಣವು ಅನಿವಾರ್ಯ ಸಂದರ್ಭದಲ್ಲಿ ಬದಲಾವಣೆಗೆ ಒಳಪಟ್ಟಿರುತ್ತದೆ.

- ಅರ್ಜಿ ಸಲ್ಲಿಸಲು ಪ್ರಾರಂಭ ದಿನಾಂಕ : 04-02-2016
- ಅರ್ಜಿ ಸಲ್ಲಿಸಲು ಕೊನೆಯ ದಿನಾಂಕ : 04-03-2016 (ರಾತ್ರಿ 11.45 ಗಂಟೆಯೊಳಗೆ)
- ಶುಲ್ಕವನ್ನು ಪಾವತಿಸಲು ಕೊನೆಯ ದಿನಾಂಕ : 05-03-2016(ಅಂಚೆ ಕಛೇರಿಯ ಕಾರ್ಯದ ವೇಳೆಯೊಳಗೆ).

ವಿಶೇಷ ಸೂಚನೆ:-

- ದಿನಾಂಕ: 17-05-2011ರ ಅಧಿಸೂಚನೆಗೆ ಅನುಗುಣವಾಗಿ ಮೋಟಾರು ವಾಹನ ನಿರೀಕ್ಷಕರ ಹುದ್ದೆಗಳಿಗೆ ಅರ್ಜಿ ಸಲ್ಲಿಸಿ ಶುಲ್ಕ ಪಾವತಿಸಿದ ಅಭ್ಯರ್ಥಿಗಳು ಮತ್ತೆ ಅರ್ಜಿ ಸಲ್ಲಿಸಬೇಕು ಶುಲ್ಕ ಪಾವತಿಸುವಂತಿಲ್ಲ. ಆದರೆ ಅರ್ಜಿಯ ನಿಗದಿತ ಅಂಕಣದಲ್ಲಿ ಅವರು ಶುಲ್ಕ ಪಾವತಿಸಿದ ವಿವರವನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು.
- ಅಭ್ಯರ್ಥಿಗಳು ಎರಡು ಹುದ್ದೆಗಳಿಗೆ ಅರ್ಜಿ ಸಲ್ಲಿಸಲು ಇಚ್ಛಿಸಿದಲ್ಲಿ, ಅರ್ಜಿಯ ನಿಗದಿತ ಅಂಕಣದಲ್ಲಿ ಮಾಹಿತಿಯನ್ನು ನೀಡಿ ಎರಡೂ ಹುದ್ದೆಗಳಿಗೆ ಸಂಬಂಧಿಸಿದ ಶುಲ್ಕ ಪಾವತಿಸತಕ್ಕದ್ದು.
- ಅಭ್ಯರ್ಥಿಗಳು ಒಂದು ಹುದ್ದೆಗೆ ಒಂದೇ ಅರ್ಜಿ ಸಲ್ಲಿಸತಕ್ಕದ್ದು, ಒಂದಕ್ಕಿಂತ ಹೆಚ್ಚು ಅರ್ಜಿಗಳನ್ನು ಸಲ್ಲಿಸಿದ್ದಲ್ಲಿ, ಅಂತಹ ಅರ್ಜಿಗಳನ್ನು ಯಾವುದೇ ಮುನ್ಸೂಚನೆಯಿಲ್ಲದೇ ತಿರಸ್ಕರಿಸಲಾಗುವುದು.
- ಅರ್ಜಿಗಳನ್ನು ಆನ್-ಲೈನ್ (ON-LINE) (ಎಲೆಕ್ಟ್ರಾನಿಕ್ ಮಾರ್ಗ) ಮುಖಾಂತರ ಮಾತ್ರ ಸಲ್ಲಿಸತಕ್ಕದ್ದು. ಅರ್ಜಿಗಳನ್ನು ಖುದ್ದಾಗಿ ಅಥವಾ ಅಂಚೆ ಮೂಲಕ ಪ್ರತ್ಯೇಕವಾಗಿ ಸಲ್ಲಿಸಲು ಅವಕಾಶವಿರುವುದಿಲ್ಲ.
- ಅಭ್ಯರ್ಥಿಗಳು ON-LINE ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಕಡ್ಡಾಯವಾಗಿ ನೀಡಿರುವ ಸೂಚನೆಗಳನ್ನು ಓದತಕ್ಕದ್ದು ಹಾಗೂ ನೀಡಿರುವ ಸೂಚನೆಗಳನ್ವಯ ಅರ್ಜಿಯನ್ನು ಭರ್ತಿ ಮಾಡತಕ್ಕದ್ದು. ತಪ್ಪು ಮಾಹಿತಿಗಳನ್ನು ನೀಡಿ ಅರ್ಜಿ ಸಲ್ಲಿಸಿದಲ್ಲಿ ಅಂತಹವರ ವಿರುದ್ಧ ಆಯೋಗವು ಕಾನೂನಿನನ್ವಯ ಸೂಕ್ತ ಕ್ರಮ ಕೈಗೊಳ್ಳುವುದು.

ಅರ್ಜಿಯಲ್ಲಿ ಮೀಸಲಾತಿಗೆ ಸಂಬಂಧಿಸಿದ ಅಂಕಣದಲ್ಲಿ ಉಪಯೋಗಿಸಿದ ಪದಗಳ ಅರ್ಥವನ್ನು ಈ ಕೆಳಕಂಡಂತೆ ಅರ್ಥೈಸಿಕೊಳ್ಳಬೇಕು:-

| | | | |
|---|---|---|---|
| ಸಾ.ಅ | ಸಾಮಾನ್ಯ ಅರ್ಹತೆ | GM | General Merit |
| ಪ.ಜಾ | ಪರಿಶಿಷ್ಟ ಜಾತಿ | SC | Scheduled Caste |
| ಪ.ಪಂ | ಪರಿಶಿಷ್ಟ ಪಂಗಡ | ST | Scheduled Tribe |
| ಪ್ರ-1 | ಪ್ರವರ್ಗ-1 | Cat - 1 | Category - I |
| 2ಎ | ಪ್ರವರ್ಗ-2ಎ | 2A | Category - 2A |
| 2ಬಿ | ಪ್ರವರ್ಗ-2ಬಿ | 2B | Category - 2B |
| 3ಎ | ಪ್ರವರ್ಗ-3ಎ | 3A | Category - 3A |

| | | | |
|---|---|---|---|
| ೩ಬಿ | ಪ್ರವರ್ಗ–3ಬಿ | 3B | Category – 3B |
| ಮಾ.ಸೈ | ಮಾಜಿ ಸೈನಿಕ | Ex-MP | Ex-Military Person |
| ಗ್ರಾಮೀಣ | ಗ್ರಾಮೀಣ ಅಭ್ಯರ್ಥಿ | Rural | Rural Candidate |
| ಕ.ಮಾ.ಅ | ಕನ್ನಡ ಮಾಧ್ಯಮ ಅಭ್ಯರ್ಥಿ | KMS | Kannada Medium Student |
| ಅಂ.ವಿ. | ಅಂಗವಿಕಲ | PH | Physically Handicapped Person |

2. ಶುಲ್ಕ:–

| | |
|---|---|
| ಸಾಮಾನ್ಯ ಅರ್ಹತೆ, ಪ್ರವರ್ಗ 2(ಎ), 2(ಬಿ), 3(ಎ), 3(ಬಿ) ಗೆ ಸೇರಿದ ಅಭ್ಯರ್ಥಿಗಳಿಗೆ | ₹: 300/– |
| ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ–1, ಅಂಗವಿಕಲ ಮತ್ತು ಮಾಜಿ ಸೈನಿಕ ಅಭ್ಯರ್ಥಿಗಳಿಗೆ | ₹: 25/– |

ಸೂಚನೆ: ಆಯೋಗದ ದಿನಾಂಕ: 17–05–2011ರ ಅಧಿಸೂಚನೆಗೆ ಅನುಗುಣವಾಗಿ ಮೋಟಾರು ವಾಹನ ನಿರೀಕ್ಷಕರ ಹುದ್ದೆಗಳಿಗೆ ಈಗಾಗಲೇ ಅರ್ಜಿ ಸಲ್ಲಿಸಿ ಶುಲ್ಕ ಸಂದಾಯ ಮಾಡಿರುವ ಅಭ್ಯರ್ಥಿಗಳು ಮತ್ತೊಮ್ಮೆ ಶುಲ್ಕ ಪಾವತಿಸುವಂತಿಲ್ಲ. ಆದರೆ ಅರ್ಜಿಯ ನಿಗದಿತ ಅಂಕಣದಲ್ಲಿ ಅವರು ಹಿಂದೇ ಸಲ್ಲಿಸಿದ ಅರ್ಜಿಯ ಐ.ಡಿ ಯನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು.

2.1 ಅರ್ಜಿಗಳನ್ನು **ON LINE** ಮೂಲಕ ಭರ್ತಿ ಮಾಡಿ ನಿಗದಿತ ಶುಲ್ಕವನ್ನು ಅಂಚೆ ಕಛೇರಿಯ ಕೆಲಸದ ವೇಳೆಯೊಳಗೆ ಕರ್ನಾಟಕದ ಯಾವುದೇ ಎಲೆಕ್ಟ್ರಾನಿಕ್ ಅಂಚೆ ಕಛೇರಿಗಳಲ್ಲಿ **(e-Payment Post Offices Only)** ಪಾವತಿ ಮಾಡಬಹುದು. ಇದನ್ನು ಹೊರತುಪಡಿಸಿ ಡಿ.ಡಿ., ಪೋಸ್ಟಲ್ ಆರ್ಡರ್, ಮನಿ ಆರ್ಡರ್ ಇವುಗಳನ್ನು ಸ್ವೀಕರಿಸಲಾಗುವುದಿಲ್ಲ. ಶುಲ್ಕ ಪಾವತಿಸದ ಅಭ್ಯರ್ಥಿಗಳ ಅರ್ಜಿಗಳನ್ನು ತಿರಸ್ಕರಿಸಲಾಗುವುದು.

3. ಅಭ್ಯರ್ಥಿಗಳು **ONLINE** ಮೂಲಕ ಅರ್ಜಿ ಭರ್ತಿ ಮಾಡುವ ಮೊದಲು ಕೆಳಕಂಡ ಸೂಚನೆಗಳನ್ನು ಕಡ್ಡಾಯವಾಗಿ ತಿಳಿದುಕೊಳ್ಳತಕ್ಕದ್ದು.

ಹಂತ 1:– ಅಭ್ಯರ್ಥಿಗಳು ಆಯೋಗದ ಅಧಿಕೃತ ವೆಬ್‌ಸೈಟ್ **http://kpsc.kar.nic.in/Home page** ನಲ್ಲಿ **APPLICATION FOR RTO / INSPECTOR OF MOTOR VEHICLES"** ಲಿಂಕ್ ಅನ್ನು ಒತ್ತಿದ್ದಲ್ಲಿ ಮುಂದಿನ ಪುಟದಲ್ಲಿ ಅಧಿಸೂಚನೆಯನ್ನು ಡೌನ್ ಲೋಡ್ ಮಾಡಿಕೊಳ್ಳಲು ಸೂಚನೆಗಳು ಇರುತ್ತವೆ. ಅರ್ಜಿಯನ್ನು ಭರ್ತಿ ಮಾಡುವ ಮುನ್ನ ಅಧಿಸೂಚನೆಯನ್ನು ಓದತಕ್ಕದ್ದು. ಅರ್ಜಿ ಸಲ್ಲಿಸಲು ಪ್ರಾರಂಭದ ದಿನಾಂಕ/ಕೊನೆಯ ದಿನಾಂಕ ಹಾಗೂ ಶುಲ್ಕ ಪಾವತಿಸಲು ಕೊನೆಯ ದಿನಾಂಕದ ವಿವರಗಳು ಮೂಡುತ್ತವೆ. ಈ ಪುಟದಲ್ಲಿ **New Registration** ಹಾಗೂ **Already Registered Button** ಗಳು ಇದ್ದು ನೀವು ಹೊಸದಾಗಿ ನೊಂದಾಯಿಸಬೇಕಿದ್ದಲ್ಲಿ New Registration Button ಒತ್ತಬೇಕು ಅಥವಾ ಈಗಾಗಲೇ ನೊಂದಾಯಿಸಿದ್ದಲ್ಲಿ **Already Registered Button** ಅನ್ನು ಒತ್ತಬೇಕು.

ಹಂತ 2:– **New Registration Button** ಒತ್ತಿದ್ದಲ್ಲಿ **Registration** ನಮೂನೆ ಮೂಡುತ್ತದೆ. ಇದರಲ್ಲಿನ ಅಗತ್ಯ ಮಾಹಿತಿಯನ್ನು ಅಂದರೆ ಹೆಸರು, ತಂದೆ/ತಾಯಿಯ /ಗಂಡ /ಹೆಂಡತಿಯ ಹೆಸರು, ಜನ್ಮ ದಿನಾಂಕ, ಮೊಬೈಲ್ ಸಂಖ್ಯೆ ಹಾಗೂ ಇ ಮೇಲ್ ವಿಳಾಸವನ್ನು ಕಡ್ಡಾಯವಾಗಿ ನಮೂದಿಸತಕ್ಕದ್ದು. ಈ ಮಾಹಿತಿಯು ಸರಿಯಾಗಿದೆ ಎಂದು ಚೆಕ್ ಬಾಕ್ಸ್‌ನಲ್ಲಿ **I Agree** ಎಂದು ಒತ್ತಿದ ನಂತರ **Submit Button** ಅನ್ನು ಒತ್ತಬೇಕು. ಆಗ ನಿಮಗೆ **Login ID** ಮತ್ತು **Password** ಅನ್ನು ನಿಮ್ಮ ಇಮೇಲ್ ವಿಳಾಸಕ್ಕೆ ನೀಡಲಾಗುತ್ತದೆ.

ಹಂತ 3:– Submit Button ಅನ್ನು ಒತ್ತಿದ ಕೂಡಲೇ ನೀವು **Registration** ನಮೂನೆಯಲ್ಲಿ ಭರ್ತಿ ಮಾಡಿದ ವಿವರಗಳು ಪರದೆಯಲ್ಲಿ ಮೂಡುತ್ತವೆ. ಈ ಪುಟದ ಮೇಲ್ಭಾಗದಲ್ಲಿ ಕಾಣಿಸುವ **Logout Button** ಅನ್ನು ಒತ್ತಿ **Login** ಪುಟದಲ್ಲಿ ನಿಮ್ಮ **Login ID** ಮತ್ತು **Password** ಅನ್ನು ಉಪಯೋಗಿಸಿ **Login Button** ಒತ್ತಿದ್ದಲ್ಲಿ Registration ನಮೂನೆಯಲ್ಲಿ ಭರ್ತಿ ಮಾಡಿದ ಎಲ್ಲಾ ವಿವರಗಳು ಮೂಡುತ್ತವೆ. ಈ ಪುಟದಲ್ಲಿನ ಮೇಲ್ಭಾಗದಲ್ಲಿ **Continue Button** ಅನ್ನು ಒತ್ತಿದ್ದಲ್ಲಿ ಅರ್ಜಿ ನಮೂನೆ ಮೂಡುತ್ತದೆ. ಈ ಅರ್ಜಿ ನಮೂನೆ ಮೇಲೆ ಮೂಡುವ 04 **Button** ಗಳಾದ **Personal Details/Qualification Details/ Additional Details and Documents Upload & Payment Details Button** ಗಳಿದ್ದು **Personal Details Button** ಒತ್ತಿದ್ದಲ್ಲಿ ನೀವು **Registration** ನಮೂನೆಯಲ್ಲಿ ಭರ್ತಿ ಮಾಡಿದ ವಿವರಗಳು ಪರದೆಯಲ್ಲಿ ಮೂಡುತ್ತವೆ. ಈ ಪುಟದ ಕೆಳಗೆ ಯಾವ ಹುದ್ದೆಗೆ ಅರ್ಜಿ ಸಲ್ಲಿಸುವಿರಿ ಎಂಬ ಮಾಹಿತಿ ನೀಡಬೇಕು. ನಂತರ **Qualification Details/ Additional Details and Documents Upload & Payment Details Button** ಗಳನ್ನು ಹಂತ ಹಂತವಾಗಿ ಒತ್ತಿ ಆಯಾ ಪುಟಗಳಲ್ಲಿನ ಎಲ್ಲಾ ವಿವರಗಳನ್ನು ಭರ್ತಿ ಮಾಡತಕ್ಕದ್ದು. ಅರ್ಜಿಯನ್ನು ಭರ್ತಿ ಮಾಡಿದ ನಂತರ ನಮೂದಿಸಿದ ವಿವರಗಳನ್ನು ಮತ್ತೊಮ್ಮೆ ಕೂಲಂಕುಷವಾಗಿ ಪರಿಶೀಲಿಸಿಕೊಳ್ಳಲು ಪ್ರತಿ ಪುಟದಲ್ಲಿಯೂ **Save & Continue Button** ಅನ್ನು ಒತ್ತಿ ಮುಂದುವರೆಯಬೇಕು. ನಿಮ್ಮ ಅರ್ಜಿಯ ಯಾವುದೇ ವಿವರಗಳ ಬದಲಾವಣೆ ಅಗತ್ಯವಿದ್ದರೆ ಆಯಾ ಪುಟದಲ್ಲಿ ಅಗತ್ಯ ತಿದ್ದುಪಡಿಗಳನ್ನು ಮಾಡಬಹುದು.

ಹಂತ 4:– **Documents Upload & Payment Details Button** ಅನ್ನು ಒತ್ತಿ ನೀವು ಸ್ಕ್ಯಾನ್ ಮಾಡಿಕೊಂಡಿರುವ ಸಹಿ ಹಾಗೂ ಭಾವಚಿತ್ರವನ್ನು ನೀಡಿರುವ ಸೂಚನೆಗಳಂತೆ **upload** ಮಾಡಬೇಕು. ಇದಲ್ಲದೆ ನಿಮ್ಮ ವಯೋಮಿತಿ/ವಿದ್ಯಾರ್ಹತೆ/ಮೀಸಲಾತಿಗೆ ಸಂಬಂಧಿಸಿದ ಎಲ್ಲಾ ದಾಖಲೆಗಳ ಸ್ಕ್ಯಾನ್ ಮಾಡಿರುವ ಪ್ರತಿಗಳನ್ನು ಕಡ್ಡಾಯವಾಗಿ **upload** ಮಾಡತಕ್ಕದ್ದು. ಸಹಿ, ಭಾವಚಿತ್ರ ಹಾಗೂ ದಾಖಲೆಗಳ ಅಳತೆಗಳು ಈ ಕೆಳಕಂಡಂತಿರಬೇಕು

| | ಪಾಸ್ ಪೋರ್ಟ್ ಭಾವಚಿತ್ರ ಹಾಗೂ ಸಹಿ ಅಳತೆ |
|---|---|
| ಪಾಸ್ ಪೋರ್ಟ್ ಭಾವಚಿತ್ರ ಅಳತೆ | 30mm × 45mm |
| File Size < 80 kb | |
| DPI Setting = 100 dpi | |
| Image Scale = 100% | |
| Color = True Color | |
| Type = JPEG/JPG | |
| ಸಹಿ ಅಳತೆ | 80mm × 35mm |
| ದಾಖಲೆಗಳ ಅಳತೆ | Pdf / JPEG/JPG ನಮೂನೆ – 150 kb |

ಹಂತ–5:– ಸಹಿ, ಭಾವಚಿತ್ರ, ವಯೋಮಿತಿ/ವಿದ್ಯಾರ್ಹತೆ/ಮೀಸಲಾತಿಗೆ ಸಂಬಂಧಿಸಿದ ಎಲ್ಲಾ ದಾಖಲೆಗಳನ್ನು **upload** ಮಾಡಿದ ನಂತರ ದೃಢೀಕರಣವನ್ನು ಓದಿ **I agree Text Box** ನಲ್ಲಿ ನಿಮ್ಮ ಒಪ್ಪಿಗೆಯನ್ನು ನೀಡಬೇಕು. ನಿಮ್ಮ ಅರ್ಜಿಯನ್ನು ಪರಿಶೀಲಿಸಲು **Preview Application** ಅನ್ನು ಒತ್ತಿ ಅರ್ಜಿಯ ಯಾವುದೇ ವಿವರಗಳ ಬದಲಾವಣೆ ಅಗತ್ಯವಿದ್ದರೆ ತಿದ್ದುಪಡಿಗಳನ್ನು ಮಾಡಬಹುದು. **Submit Button** ಅನ್ನು ಒತ್ತಿದಲ್ಲಿ ಭರ್ತಿಮಾಡಿರುವ ಅರ್ಜಿಯ ನಮೂನೆಯನ್ನು ನೋಡಲು **Application Form Button** ಅನ್ನು ಒತ್ತಬೇಕು. ಈ ನಮೂನೆಯ ಮೇಲ್ಭಾಗದಲ್ಲಿರುವ **Print Form Button**ನ್ನು ಒತ್ತಿ ನೀವು ಭರ್ತಿ ಮಾಡಿರುವ ಅರ್ಜಿ ನಮೂನೆಯನ್ನು ಮುದ್ರಿಸಿಕೊಳ್ಳಬಹುದು. ನಂತರ **Challan Download Button** ಅನ್ನು ಒತ್ತಿದ್ದಲ್ಲಿ ಶುಲ್ಕ ಪಾವತಿಸಲು ದ್ವಿಪ್ರತಿಯಲ್ಲಿ ಚಲನ್ ಪರದೆಯ ಮೇಲೆ ಮೂಡುತ್ತಿದ್ದು, ಇದರಲ್ಲಿ **Save** ಅಥವಾ **Download Button** ಗಳಿರುತ್ತವೆ. **Challan Download** ಮಾಡಿಕೊಂಡು ಕರ್ನಾಟಕ ರಾಜ್ಯದಲ್ಲಿನ ಯಾವುದೇ ಇ–ಪಾವತಿ ಅಂಚೆ ಕಛೇರಿಗೆ ಹೋಗಿ, ನಿಗದಿತ ಅರ್ಜಿ ಶುಲ್ಕವನ್ನು ಪಾವತಿ ಮಾಡಿ, ಅಂತಿಮವಾಗಿ ಪೋಸ್ಟ್ ಆಫೀಸ್ ಸ್ಟಿಕ್ಕರ್ ಅನ್ನು ನಿಮ್ಮ **Challan** ಪ್ರತಿಯ ಮೇಲೆ ಅಂಟಿಸುವುದರಿಂದ ನಿಮ್ಮ ಶುಲ್ಕ ಪಾವತಿಯನ್ನು ದೃಢಪಡಿಸಲಾಗುತ್ತದೆ

**Submit Button** ಅನ್ನು ಒತ್ತಿದ ನಂತರ ಅರ್ಜಿಯಲ್ಲಿ ಯಾವುದೇ ತಿದ್ದುಪಡಿಗಳನ್ನು ಮಾಡಲು ಅವಕಾಶ ಇರುವುದಿಲ್ಲ.

**Note:-** ಶುಲ್ಕವನ್ನು ಪಾವತಿಸಲು ನಿಗದಿಪಡಿಸಿದ ಕೊನೆಯ ದಿನಾಂಕ: 05 –03–2016 (ಅಂಚೆ ಕಛೇರಿಗಳ ಕಾರ್ಯದ ವೇಳೆಯೊಳಗೆ) ರ ನಂತರ ಶುಲ್ಕವನ್ನು ಸಂದಾಯ ಮಾಡಲು ಅವಕಾಶವಿರುವುದಿಲ್ಲ.

ಹಂತ 6:– ಶುಲ್ಕ ಪಾವತಿಯ ಎರಡು ದಿನಗಳ ನಂತರ ಶುಲ್ಕ ಸ್ವೀಕೃತಿಯ ವಿವರಗಳನ್ನು "**www. Karnataka post. gov.in** ರಲ್ಲಿ ನೋಡಬಹುದು. ಈ ವಿಷಯದಲ್ಲಿ ಏನಾದರೂ ತೊಂದರೆಯಾದಲ್ಲಿ **Help line** ಅನ್ನು ಸಂಪರ್ಕಿಸಬಹುದು.

ಹಂತ–7:– ಕ್ರಮಬದ್ಧವಾಗಿ ಅರ್ಜಿಯನ್ನು ಸಲ್ಲಿಸಿದ ಅಭ್ಯರ್ಥಿಗಳಿಗೆ ಎಸ್.ಎಂ.ಎಸ್ /ಅವರ ಇಮೇಲ್ ವಿಳಾಸಕ್ಕೆ ಅರ್ಜಿ ಸ್ವೀಕೃತಿಯ ಮಾಹಿತಿಯನ್ನು ಕಳುಹಿಸಲಾಗುವುದು.

3.1 ಅಭ್ಯರ್ಥಿಗಳು ಅರ್ಜಿಯಲ್ಲಿ ತಮ್ಮ ಮೊಬೈಲ್ ಸಂಖ್ಯೆ / ಮಿಂಚಂಚೆ (ಇ–ಮೇಲ್) ವಿಳಾಸವನ್ನು (Unique Email ID) ಕಡ್ಡಾಯವಾಗಿ ನಮೂದಿಸತಕ್ಕದ್ದು.

3.2 ಅಭ್ಯರ್ಥಿಗಳು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದವರೆಗೂ ವಿಳಂಬ ಮಾಡದೆ ಮುಂಚಿತವಾಗಿ ಅರ್ಜಿಗಳನ್ನು ಸಲ್ಲಿಸತಕ್ಕದ್ದು.

3.3 ಶುಲ್ಕವನ್ನು ಪಾವತಿಸಲು ನಿಗದಿಪಡಿಸಿದ ಕೊನೆಯ ದಿನಾಂಕ/ಸಮಯದ ನಂತರ ಶುಲ್ಕವನ್ನು ಸಂದಾಯ ಮಾಡಲು ಅವಕಾಶವಿರುವುದಿಲ್ಲ.

ವಿಶೇಷ ಸೂಚನೆ: **On-line** ಮೂಲಕ ಅರ್ಜಿಯನ್ನು ಭರ್ತಿಮಾಡುವ ಸಂದರ್ಭದಲ್ಲಿ ಯಾವುದಾದರೂ ತಾಂತ್ರಿಕ ತೊಂದರೆ ಅಥವಾ ಸಮಸ್ಯೆ ಎದುರಾದಲ್ಲಿ ಸಹಾಯವಾಣಿ **(Help line) No.7337812816/ 9538791579** ಮೂಲಕ ಬೆಳಿಗ್ಗೆ 9–00 ಗಂಟೆಯಿಂದ ಸಂಜೆ 6–00 ಗಂಟೆಯವರೆಗೆ ಸಂಪರ್ಕಿಸಿ ಅಗತ್ಯ ಮಾಹಿತಿ ಪಡೆದು ಅರ್ಜಿ ಸಲ್ಲಿಸಬಹುದು.

4. ಅರ್ಹತಾ ಷರತ್ತುಗಳು:–

(ಅ) ಭಾರತೀಯ ನಾಗರೀಕನಾಗಿರತಕ್ಕದ್ದು.

(ಆ) ಒಬ್ಬ ಜೀವಂತ ಪತ್ನಿಗಿಂತ ಹೆಚ್ಚು ಮಂದಿ ಪತ್ನಿಯರನ್ನು ಹೊಂದಿರುವ ಪುರುಷ ಅಭ್ಯರ್ಥಿ ಮತ್ತು ಈಗಾಗಲೇ ಇನ್ನೊಬ್ಬ ಹೆಂಡತಿ ಇರುವ ವ್ಯಕ್ತಿಯನ್ನು ಮದುವೆಯಾಗಿರುವ ಮಹಿಳಾ ಅಭ್ಯರ್ಥಿಯು ಸರ್ಕಾರದಿಂದ ಪೂರ್ವಾನುಮತಿಯನ್ನು ಪಡೆಯದೇ ನೇಮಕಾತಿಗೆ ಅರ್ಹರಾಗುವುದಿಲ್ಲ.

(ಇ) ಅಭ್ಯರ್ಥಿಯು ಮಾನಸಿಕವಾಗಿ ಮತ್ತು ದೈಹಿಕವಾಗಿ ಆರೋಗ್ಯವಂತರಾಗಿರಬೇಕು ಮತ್ತು ಅವರ ನೇಮಕಾತಿಯು ಕರ್ತವ್ಯಗಳ ದಕ್ಷ ನಿರ್ವಹಣೆಗೆ ಆತಂಕವನ್ನುಂಟು ಮಾಡುವ ಸಂಭವ ಇರುವ ಯಾವುದೇ ದೈಹಿಕ ನ್ಯೂನತೆಯಿಂದ ಮುಕ್ತರಾಗಿರಬೇಕು.

(ಈ) ದೈಹಿಕವಾಗಿ ಅನರ್ಹರಾಗಿದ್ದಾರೆಂಬುದಾಗಿ ವೈದ್ಯಕೀಯ ಮಂಡಳಿಯ ವರದಿಯ ಮೇಲೆ ಅನರ್ಹರೆಂಬುದಾಗಿ ತಿರಸ್ಕರಿಸುವ ಪೂರ್ಣ ವಿವೇಚನೆಯನ್ನು ರಾಜ್ಯ ಸರ್ಕಾರವು ಕಾಯ್ದಿರಿಸಿಕೊಂಡಿದೆ ಮತ್ತು ಸರ್ಕಾರದ ವಿವೇಚನೆಯು ಯಾವುದೇ ವಿಧದಲ್ಲೂ ಈ ನಿಯಮಗಳ ಮೂಲಕ ಸೀಮಿತವಾಗಿರುವುದಿಲ್ಲ.

ನಿಗದಿತ ಶೈಕ್ಷಣಿಕ ಅರ್ಹತೆಯ ಜೊತೆಗೆ ಈ ಮೇಲ್ಕಂಡ ಅರ್ಹತೆಗಳನ್ನು ಹೊಂದಿರುವ ಅಭ್ಯರ್ಥಿಗಳು ನೇಮಕಾತಿಗಾಗಿ ಅರ್ಜಿ ಸಲ್ಲಿಸಲು ಅರ್ಹತೆಯನ್ನು ಹೊಂದಿರುತ್ತಾರೆ.

5. ನೇಮಕಾತಿ ವಿಧಾನ:-

5.1. ಕಡ್ಡಾಯ ಕನ್ನಡ ಭಾಷಾ ಪರೀಕ್ಷೆ:-

ಕಾಲಕಾಲಕ್ಕೆ ತಿದ್ದುಪಡಿಯಾದ ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಮತ್ತು ಆಯ್ಕೆ) (ಸಾಮಾನ್ಯ) ನಿಯಮಗಳು 2006 ರಲ್ಲಿ ನಿರ್ದಿಷ್ಟಪಡಿಸಲಾದಂತೆ, ಅಧಿಸೂಚಿಸಲಾಗಿರುವ ಯಾವುದೇ ತಾಂತ್ರಿಕ/ ತಾಂತ್ರಿಕೇತರ ಹುದ್ದೆಗಳ ಸಂದರ್ಶನಕ್ಕೆ ಅರ್ಹರಾಗಲು ಅಭ್ಯರ್ಥಿಗಳು ಆಯೋಗ ನಡೆಸುವ ಎಸ್.ಎಸ್.ಎಲ್.ಸಿ.ಯ ಕನ್ನಡ ಪ್ರಥಮ ಭಾಷೆಯ ಮಟ್ಟದ 150 ಅಂಕಗಳ ಪರೀಕ್ಷೆಯಲ್ಲಿ ಕನಿಷ್ಠ 50 ಅಂಕಗಳೊಂದಿಗೆ ಕಡ್ಡಾಯವಾಗಿ ತೇರ್ಗಡೆ ಹೊಂದಲೇಬೇಕು. ನಿಗದಿಪಡಿಸಿದ ಕನಿಷ್ಠ 50 ಅಂಕಗಳನ್ನು ಪಡೆಯದ ಅಭ್ಯರ್ಥಿಗಳು ಸಂದರ್ಶನಕ್ಕೆ/ಆಯ್ಕೆಗೆ ಅನರ್ಹರಾಗುವುದಿಲ್ಲ ಹಾಗೂ ಈ ಕನ್ನಡ ಪರೀಕ್ಷೆಯಲ್ಲಿ ಪಡೆದ ಅಂಕಗಳನ್ನು ಆಯ್ಕೆಗೆ ಪರಿಗಣಿಸುವುದಿಲ್ಲ.

ಆದರೆ ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯ ವಿನಾಯಿತಿ ಬಗ್ಗೆ ಕೆಳಕಂಡ ಷರತ್ತುಗಳನ್ನು ಸೇರ್ಪಡಿಸಲಾಗಿರುತ್ತದೆ.

" ಎಸ್.ಎಸ್.ಎಲ್.ಸಿ. ಅಥವಾ ಇದಕ್ಕೆ ತತ್ಸಮಾನವೆಂದು ರಾಜ್ಯ ಸರ್ಕಾರದಿಂದ ಘೋಷಿಸಲ್ಪಟ್ಟ ಇತರೆ ಯಾವುದೇ ಪರೀಕ್ಷೆಯಲ್ಲಿ ಅಥವಾ ಎಸ್.ಎಸ್.ಎಲ್.ಸಿ. ಪರೀಕ್ಷೆಗಿಂತ ಮೇಲ್ಪಟ್ಟದ ಯಾವುದೇ ಪರೀಕ್ಷೆಯಲ್ಲಿ ಕನ್ನಡವನ್ನು ಮುಖ್ಯ ಭಾಷೆಯಾಗಿ, ಅಥವಾ ದ್ವಿತೀಯ ಭಾಷೆಯಾಗಿ ಅಥವಾ ಐಚ್ಛಿಕ ವಿಷಯವಾಗಿ (ಆದರೆ ಸಂಯುಕ್ತ ಪತ್ರಿಕೆಯ ವಿಷಯಗಳಲ್ಲೊಂದಾಗಿರಬಾರದು) ಅಥವಾ ಮೇಲಿನ ಪರೀಕ್ಷೆಗಳಲ್ಲಿ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿ ತೇರ್ಗಡೆಯಾಗಿರುವ ಅಥವಾ ಕರ್ನಾಟಕ ಲೋಕಸೇವಾ ಆಯೋಗದಿಂದ ಇದೇ ನಿಯಮಗಳಡಿಯಲ್ಲಿ ಈ ಹಿಂದೆ ನಡೆಸಲ್ಪಟ್ಟ ಕಡ್ಡಾಯ ಕನ್ನಡ ಭಾಷೆ ಪರೀಕ್ಷೆಯಲ್ಲಿ ತೇರ್ಗಡೆಯಾಗಿರುವ ಅಭ್ಯರ್ಥಿಗಳು, ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಉತ್ತೀರ್ಣರಾಗುವುದರಿಂದ ವಿನಾಯಿತಿ ಹೊಂದಿರುತ್ತಾರೆ ".

ವಿಶೇಷ ಸೂಚನೆ:- ಎಸ್.ಎಸ್.ಎಲ್.ಸಿ. ಪರೀಕ್ಷೆಯಲ್ಲಿ ಕನ್ನಡ ಭಾಷೆಯನ್ನು ತೃತೀಯ ಭಾಷೆಯನ್ನಾಗಿ ಅಭ್ಯಸಿಸಿದ್ದಲ್ಲಿ ಅಥವಾ ಇತರೆ ಕನ್ನಡ ಭಾಷಾ ಪರೀಕ್ಷೆಗಳಲ್ಲಿ / ಇಲಾಖಾ ಪರೀಕ್ಷೆಗಳಲ್ಲಿ ತೇರ್ಗಡೆ ಹೊಂದಿದಂತಹ ಅಭ್ಯರ್ಥಿಗಳಿಗೆ ಈ ಮೇಲಿನ ವಿನಾಯಿತಿ ಪಡೆಯಲು ಅವಕಾಶ ಇರುವುದಿಲ್ಲ ಆದುದರಿಂದ, ಇವರು ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯನ್ನು ಕಡ್ಡಾಯವಾಗಿ ತೆಗೆದುಕೊಳ್ಳಲೇ ಬೇಕಿರುತ್ತದೆ.

ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಿಂದ ವಿನಾಯಿತಿ ಪಡೆಯಲು ಅರ್ಜಿಯ ನಿಗದಿತ ಸ್ಥಳದಲ್ಲಿ ವಿವರಗಳನ್ನು ನೀಡತಕ್ಕದ್ದು. ಸರಿಯಾದ ಮಾಹಿತಿ ಒದಗಿಸದಿದ್ದಲ್ಲಿ ಮೇಲಿನ ವಿನಾಯಿತಿಗಳನ್ನು ಪಡೆಯಲು ಅರ್ಹತೆ ನೀಡುವುದಿಲ್ಲ. ಹಾಗೂ ವಿನಾಯಿತಿ ಪಡೆಯಲು ತಪ್ಪಾಗಿ ಮಾಹಿತಿ ನೀಡುವ ಅಭ್ಯರ್ಥಿಗಳಿಗೆ ಸಂದರ್ಶನದ ಮುನ್ನವೇ ಅನರ್ಹಗೊಳಿಸಲಾಗುವುದು. ಮುಂದುವರಿದು, ಅರ್ಜಿಯಲ್ಲಿ ಈ ಮಾಹಿತಿಯನ್ನು ತಪ್ಪಾಗಿ ನೀಡಿದ ನಂತರ ಇದನ್ನು ಸರಿಪಡಿಸಿಕೊಳ್ಳಲು ಅವಕಾಶ ನೀಡಲಾಗುವುದಿಲ್ಲ. ಆದುದರಿಂದ, ಅಭ್ಯರ್ಥಿಗಳು ಅರ್ಜಿ ಭರ್ತಿ ಮಾಡುವಾಗ ಎಲ್ಲಾ ವಿಷಯಗಳನ್ನು ಪರಿಶೀಲಿಸಿ ಸರಿಯಾಗಿರುವ ಬಗ್ಗೆ ಖಚಿತಪಡಿಸಿಕೊಂಡ ನಂತರವೇ ಒಪ್ಪಿಗೆಯನ್ನು ನೀಡಬೇಕೆಂದು ಸೂಚಿಸಿದೆ.

5.2 ಕರ್ನಾಟಕ ನಾಗರೀಕ ಸೇವೆಗಳು (ಸ್ಪರ್ಧಾತ್ಮಕ ಪರೀಕ್ಷೆ ಮೂಲಕ ನೇರ ನೇಮಕಾತಿ ಹಾಗೂ ಆಯ್ಕೆ) (ಸಾಮಾನ್ಯ)(ತಿದ್ದುಪಡಿ) ನಿಯಮಗಳು 2015 ರಂತೆ ಗ್ರೂಪ್ "ಎ" ಮತ್ತು "ಬಿ " ತಾಂತ್ರಿಕ / ತಾಂತ್ರಿಕವಲ್ಲದ ಹುದ್ದೆಗಳ ನೇಮಕಾತಿಯನ್ನು ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಹಾಗೂ ಆಯೋಗವು ನಡೆಸುವ ಸಂದರ್ಶನದಲ್ಲಿ ಪಡೆದ ಒಟ್ಟು ಶೇಕಡವಾರು ಅಂಕಗಳ ಮೇರೆಗೆ ಮತ್ತು ಗ್ರೂಪ್ "ಸಿ" ತಾಂತ್ರಿಕ/ತಾಂತ್ರಿಕವಲ್ಲದ ಹುದ್ದೆಗಳಿಗೆ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪಡೆದ ಒಟ್ಟು ಶೇಕಡವಾರು ಅಂಕಗಳ ಮೇರೆಗೆ ಆಯ್ಕೆ ಮಾಡಲಾಗುವುದು.

ಪ್ರಾದೇಶಿಕ ಸಾರಿಗೆ ಅಧಿಕಾರಿ ಹುದ್ದೆಯು ಸಮೂಹ ಗ್ರೂಪ್-ಎ ತಾಂತ್ರಿಕ ಹುದ್ದೆಯಾಗಿದ್ದು, ನೇಮಕಾತಿಯನ್ನು ಸ್ಪರ್ಧಾತ್ಮಕ ಪರೀಕ್ಷೆ ಮತ್ತು ಸಂದರ್ಶನ ಮೂಲಕ ಮಾಡಲಾಗುತ್ತದೆ. ಮೋಟಾರು ವಾಹನ ನಿರೀಕ್ಷಕರ ಹುದ್ದೆಯು ಗ್ರೂಪ್-ಸಿ ತಾಂತ್ರಿಕ ಹುದ್ದೆಗಳಾಗಿರುವುದರಿಂದ ನೇಮಕಾತಿಯನ್ನು ಸ್ಪರ್ಧಾತ್ಮಕ ಪರೀಕ್ಷೆಯ ಮೂಲಕ ಮಾಡಲಾಗುವುದು.

5.3 ಸ್ಪರ್ಧಾತ್ಮಕ ಪರೀಕ್ಷಾ ವಿಧಾನ:

ಸ್ಪರ್ಧಾತ್ಮಕ ಪರೀಕ್ಷೆಯು ವಸ್ತು ನಿಷ್ಠ ಬಹು ಆಯ್ಕೆ ಮಾದರಿಯಲ್ಲಿದ್ದು ಋಣಾತ್ಮಕ ಮೌಲ್ಯಮಾಪನವಿರುತ್ತದೆ. ಪ್ರತಿ ತಪ್ಪು ಉತ್ತರಕ್ಕೆ 0.25 ಅಂಕಗಳನ್ನು ಕಳೆಯಲಾಗುವುದು. Competitive examination will be of Objective Multiple Choice type and there will be negative valuation. For every wrong answer 0.25 marks will be deducted.

| | | | |
|---|---|---|---|
| ಪತ್ರಿಕೆ- 1/ Paper -1 | ಸಾಮಾನ್ಯ ಪತ್ರಿಕೆ/ General Paper | 200 ಅಂಕಗಳು/Marks | ಅವಧಿ/Duration: 1 1/2 ಗಂಟೆ/hours |
| ಪತ್ರಿಕೆ- 2/ Paper -2 | ನಿರ್ದಿಷ್ಟ ಪತ್ರಿಕೆ / Specific Paper | 200 ಅಂಕಗಳು/Marks | ಅವಧಿ/Duration: 2 ಗಂಟೆ/hours |

ಸದರಿ ಹುದ್ದೆಗಳ ನೇಮಕಾತಿಗಳ ಸ್ಪರ್ಧಾತ್ಮಕ ಪರೀಕ್ಷೆಯನ್ನು ಆಫ್ ಲೈನ್-ಓಎಂಆರ್ ಮಾದರಿ **(Offline-OMR type)** ಅಥವಾ ಗಣಕ ಯಂತ್ರದ ಮೂಲಕ ಸ್ಪರ್ಧಾತ್ಮಕ ಪರೀಕ್ಷೆ **(Computer based competitive exam-CBCE)** ಮುಖಾಂತರ ನಡೆಸಲಾಗುವುದು. ಈ ವಿಷಯದಲ್ಲಿ ಆಯೋಗದ ತೀರ್ಮಾನವೇ ಅಂತಿಮವಾಗಿರುತ್ತದೆ. ಗಣಕ ಯಂತ್ರದ ಮೂಲಕ ಸ್ಪರ್ಧಾತ್ಮಕ ಪರೀಕ್ಷೆ **(Computer based competitive exam-CBCE)** ಪರೀಕ್ಷೆಯನ್ನು ನಡೆಸಲು ತೀರ್ಮಾನವಾದಲ್ಲಿ ಅಭ್ಯರ್ಥಿಗಳಿಗೆ ಈ ಸಂಬಂಧ ಸೂಚನೆಗಳನ್ನು ಹಾಗೂ ಅಣಕು ಪರೀಕ್ಷೆಯನ್ನು **(Mock test)** ತೆಗೆದುಕೊಳ್ಳುವ ಬಗ್ಗೆ ಮಾಹಿತಿಯನ್ನು ಆಯೋಗದ ಅಂತರ್ಜಾಲದಲ್ಲಿ ಪ್ರಕಟಿಸಲಾಗುವುದು.

ಸೂಚನೆ:- ಕನ್ನಡ ಕಡ್ಡಾಯ ಭಾಷಾ ಪರೀಕ್ಷೆ ಹಾಗೂ ಸ್ಪರ್ಧಾತ್ಮಕ ಪರೀಕ್ಷೆಯ ಪಠ್ಯಕ್ರಮಗಳ ವಿವರಗಳನ್ನು ಆಯೋಗದ ವೆಬ್‌ಸೈಟ್ " **http://kpsc.kar.nic.in/ Syllabus** " ಲಿಂಕ್‌ನಲ್ಲಿ ಬಿತ್ತರಿಸಲಾಗಿದೆ.

ಸ್ಪರ್ಧಾತ್ಮಕ ಪರೀಕ್ಷೆ ಪ್ರಶ್ನೆ ಪತ್ರಿಕೆಗಳು ಕನ್ನಡ ಮತ್ತು ಆಂಗ್ಲ ಭಾಷೆಗಳೆರಡರಲ್ಲೂ ಇರುತ್ತವೆ. ಕನ್ನಡ ಭಾಷೆಯಲ್ಲಿರುವ ಪ್ರಶ್ನೆಗಳ ಭಾಷಾಂತರದಲ್ಲಿ ಏನಾದರೂ ಅಸ್ಪಷ್ಟತೆ ಇದ್ದಲ್ಲಿ ಅಭ್ಯರ್ಥಿಗಳು ಆಂಗ್ಲ ಭಾಷೆಯಲ್ಲಿರುವ ಪ್ರಶ್ನೆಗಳನ್ನು ನೋಡುವುದು ಹಾಗೂ ಇದೇ ಅಂತಿಮವಾಗಿರುತ್ತದೆ.

ಟಿಪ್ಪಣಿ:- ಪ್ರಶ್ನೆ ಪತ್ರಿಕೆ ಬಗ್ಗೆ ಯಾವುದೇ ಬಗೆಯ ಆಕ್ಷೇಪಣೆ ಇದ್ದಲ್ಲಿ, ಪರೀಕ್ಷಾ ಕೇಂದ್ರವನ್ನು ಬಿಡುವ ಮೊದಲು ಪರೀಕ್ಷಾ ದಿನವೇ ಸಂಬಂಧಿತ ಮೇಲ್ವಿಚಾರಕರ ಮುಖಾಂತರ ನಿಗಧಿತ ಮಾದರಿಯಲ್ಲಿ ಲಿಖಿತ ಮನವಿಯನ್ನು ಆಯೋಗಕ್ಕೆ ಸಲ್ಲಿಸಿ ಸ್ವೀಕೃತಿ (Acknowledgement) ಪಡೆಯಬೇಕು. ಪರೀಕ್ಷಾ ಕೇಂದ್ರ ಬಿಟ್ಟ ನಂತರ ಕಳುಹಿಸುವ ಯಾವುದೇ ಆಕ್ಷೇಪಣೆಯನ್ನು ಮಾನ್ಯ ಮಾಡಲಾಗುವುದಿಲ್ಲ.

5.4 ಪ್ರಾದೇಶಿಕ ಸಾರಿಗೆ ಅಧಿಕಾರಿ ಹುದ್ದೆಗಳಿಗೆ ಸಂಬಂಧಪಟ್ಟಂತೆ ಕಡ್ಡಾಯ ಕನ್ನಡ ಭಾಷಾ ಪರೀಕ್ಷೆಯಲ್ಲಿ ಅರ್ಹರಾದ ನಂತರ ನಿಯಮಾನುಸಾರ ಅಭ್ಯರ್ಥಿಗಳನ್ನು ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳ ಶೇಕಡವಾರು ಮತ್ತು ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳ ಆಧಾರದ ಮೇಲೆ 1:3 ಅನುಪಾತದಲ್ಲಿ ಸಂದರ್ಶನಕ್ಕೆ ಆಹ್ವಾನಿಸಲಾಗುವುದು. ಸಂದರ್ಶನ ನಡೆಸುವ ಉದ್ದೇಶ ಎಂದರೆ ಅಭ್ಯರ್ಥಿಗಳು ಆಯ್ಕೆ ಬಯಸಿದ ಹುದ್ದೆಗೆ ಅವರ ಅರ್ಹತೆ, ವ್ಯಕ್ತಿತ್ವ, ಸಂಬಂಧಿತ ವಿಷಯದಲ್ಲಿ ವ್ಯಕ್ತಪಡಿಸುವ ಸಾಮರ್ಥ್ಯತೆ, ಸೂಕ್ಷ್ಮತೆ ಮತ್ತು ಕರ್ತೃತ್ವ ಶಕ್ತಿ, ಸಾಮಾನ್ಯ ಜ್ಞಾನ ಹಾಗೂ ವಿಷಯದಲ್ಲಿನ ಪರಿಜ್ಞಾನ ಹಾಗೂ ಇನ್ನಿತರ ವಿಶೇಷ ಗುಣಗಳನ್ನು ನಿರ್ಧರಿಸುವುದಾಗಿರುತ್ತದೆ.

ಸಂದರ್ಶನಕ್ಕೆ ನಿಗದಿಪಡಿಸಿದ ಗರಿಷ್ಠ ಅಂಕಗಳು:– ಸ್ಪರ್ಧಾತ್ಮಕ ಪರೀಕ್ಷೆಗೆ ನಿಗದಿಪಡಿಸಿದ ಒಟ್ಟು ಅಂಕಗಳ ಶೇಕಡ 12.5ರಷ್ಟು ಸಂದರ್ಶನಕ್ಕೆ ನಿಗದಿಪಡಿಸಿದ ಗರಿಷ್ಠ ಅಂಕಗಳಾಗಿರುತ್ತವೆ. ಆಯೋಗವು ನಿಯಮಾನುಸಾರ ನಡೆಸುವ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಗಳಿಸಿದ ಒಟ್ಟು ಅಂಕಗಳು ಮತ್ತು ಸಂದರ್ಶನದಲ್ಲಿ ಗಳಿಸಿದ ಅಂಕಗಳ ಶೇಕಡವಾರು ಜೇಷ್ಠತೆಯನ್ನು ಆಧರಿಸಿ ಹಾಗೂ ಕಾಲಕಾಲಕ್ಕೆ ಚಾಲ್ತಿಯಲ್ಲಿರುವ ನಿಯಮಗಳನುಸಾರ ಹುದ್ದೆಗಳ ನೇಮಕಾತಿಗಾಗಿ ಇರುವ ಮೀಸಲಾತಿಯನ್ವಯ ಪ್ರಕಟಿಸಲಾದ ಖಾಲಿ ಹುದ್ದೆಗಳ ಸಂಖ್ಯೆಗೆ ಅನುಗುಣವಾಗಿ ಅಭ್ಯರ್ಥಿಗಳನ್ನು ಆಯ್ಕೆ ಮಾಡಲಾಗುತ್ತದೆ.

5.5 ಮೋಟಾರು ವಾಹನ ನಿರೀಕ್ಷಕರ ಹುದ್ದೆಗಳಿಗೆ ಸ್ಪರ್ಧಾತ್ಮಕ ಪರೀಕ್ಷೆಯಲ್ಲಿ ಪಡೆದ ಶೇಕಡವಾರು ಅಂಕಗಳು ಮತ್ತು ಚಾಲ್ತಿಯಲ್ಲಿರುವ ಮೀಸಲಾತಿ ನಿಯಮಗಳ ಮೇರೆಗೆ ಆಯ್ಕೆ ಮಾಡಲಾಗುವುದು.

ಸೂಚನೆ: ಅಭ್ಯರ್ಥಿಗಳು ಪರೀಕ್ಷೆಗೆ / ಸಂದರ್ಶನಕ್ಕೆ ತಮ್ಮ ಸ್ವಂತ ಖರ್ಚಿನಲ್ಲಿ ಹಾಜರಾಗಬೇಕು.

6. <u>ಶೈಕ್ಷಣಿಕ ವಿದ್ಯಾರ್ಹತೆ ಮತ್ತು ವಯೋಮಿತಿ:–</u>

6.1 <u>ಶೈಕ್ಷಣಿಕ ವಿದ್ಯಾರ್ಹತೆ:</u>– ಅರ್ಜಿಗಳನ್ನು ಭರ್ತಿ ಮಾಡಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಅನುಸೂಚಿಯಲ್ಲಿ ಆಯಾ ಹುದ್ದೆಗಳ ಮುಂದೆ ಸೂಚಿಸಿರುವ ವಿದ್ಯಾರ್ಹತೆಯನ್ನು ಅಭ್ಯರ್ಥಿಗಳು ಹೊಂದಿರಲೇಬೇಕು.

<u>ಮೋಟಾರು ವಾಹನ ನಿರೀಕ್ಷಕರ ಹುದ್ದೆಗಳಿಗೆ ಸಂಬಂಧಪಟ್ಟಂತೆ ಸೂಚನೆಗಳು:</u>

(ಅ) ಈ ಹುದ್ದೆಗಳಿಗೆ ನಿಗದಿಪಡಿಸಿರುವ ಸೇವಾನುಭವವನ್ನು ನಿಗದಿತ ವಿದ್ಯಾರ್ಹತೆ ಹೊಂದಿದ ನಂತರ ಮತ್ತು ಕೊನೆಯ ದಿನಾಂಕದ ಒಳಗೆ ಹೊಂದಿರಬೇಕು. ಅಧಿಸೂಚನೆಯಲ್ಲಿ ಅನುಬಂಧಿಸಲಾಗಿರುವ ನಮೂನೆಯಲ್ಲಿಯೇ ಸೇವಾನುಭವ ಪ್ರಮಾಣ ಪತ್ರ ಸಂಸ್ಥೆಯ ಶೀರ್ಷಿಕೆಯ ಹಾಳೆ **(letter head)** ನಲ್ಲಿಯೇ ಹೊಂದಿರಬೇಕು ಇನ್ನಾವುದೇ ನಮೂನೆಯ ಸೇವಾನುಭವ ಪ್ರಮಾಣ ಪತ್ರ ಹೊಂದಿರದಿದ್ದಲ್ಲಿ ತಿರಸ್ಕರಿಸಲಾಗುವುದು.

(ಆ) ವಾಹನ ಚಾಲನೆಗೆ ಸಂಬಂಧಿಸಿದ ಲೈಸೆನ್ಸ್‌ನ್ನು ಅರ್ಜಿಗಳನ್ನು ಸ್ವೀಕರಿಸಲು ನಿಗದಿಪಡಿಸಿದ ಕೊನೆಯ ದಿನಾಂಕದ ಒಳಗಾಗಿ ಪಡೆದಿಟ್ಟುಕೊಂಡಿರತಕ್ಕದ್ದು.

(ಇ) ಸರ್ಕಾರಿ ವೈದ್ಯಕೀಯ ಸಂಸ್ಥೆಯಿಂದ ಅಧಿಸೂಚನೆಯೊಂದಿಗೆ ಅನುಬಂಧಿಸಲಾದ ನಮೂನೆಯಲ್ಲಿನ ಪ್ರಮಾಣ ಪತ್ರವನ್ನು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ದಿನಾಂಕದ ಒಳಗಾಗಿ ಪಡೆದಿಟ್ಟುಕೊಂಡಿರತಕ್ಕದ್ದು.

6.2 <u>ವಯೋಮಿತಿ:–</u> ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಈ ಕೆಳಕಂಡ ಕನಿಷ್ಠ ವಯೋಮಿತಿಯನ್ನು ಹೊಂದಿರಬೇಕು ಹಾಗೂ ಗರಿಷ್ಠ ವಯೋಮಿತಿಯನ್ನು ಮೀರಿರಬಾರದು :

| | | |
|---|---|---|
| | ಕನಿಷ್ಠ | 18 ವರ್ಷ |
| | ಗರಿಷ್ಠ:<br>ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳಿಗೆ | 35 ವರ್ಷಗಳು |
| | ಪ್ರವರ್ಗ 2ಎ/2ಬಿ/3ಎ/3ಬಿ ಅಭ್ಯರ್ಥಿಗಳಿಗೆ | 38 ವರ್ಷಗಳು |
| | ಪರಿಶಿಷ್ಟ ಜಾತಿ/ಪರಿಶಿಷ್ಟ ಪಂಗಡ / ಪ್ರವರ್ಗ 1 ಅಭ್ಯರ್ಥಿಗಳಿಗೆ | 40 ವರ್ಷಗಳು |
| ಈ ಕೆಳಗಿನ ಸಂದರ್ಭಗಳಲ್ಲಿ ನೇಮಕಾತಿಯ ಗರಿಷ್ಠ ವಯೋಮಿತಿಯನ್ನು ಕೆಳಗೆ ತಿಳಿಸಿರುವಷ್ಟರ ಮಟ್ಟಿಗೆ ಹೆಚ್ಚಿಸಲಾಗುವುದು. | | |
| (ಅ) | ಕರ್ನಾಟಕ ರಾಜ್ಯ ಸರ್ಕಾರದಲ್ಲಿ ಅಥವಾ ಸ್ಥಳೀಯ ಪ್ರಾಧಿಕಾರದಲ್ಲಿ ಅಥವಾ ರಾಜ್ಯ ಅಧಿನಿಯಮ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಯಾದ ಅಥವಾ ರಾಜ್ಯ ಅಧಿನಿಯಮದ ಅಥವಾ ಕೇಂದ್ರ ಅಧಿನಿಯಮದ ಮೂಲಕ ಸ್ಥಾಪನೆಗೊಂಡು ಕರ್ನಾಟಕ ರಾಜ್ಯ ಸರ್ಕಾರದ ಸ್ವಾಮ್ಯ ಅಥವಾ ನಿಯಂತ್ರಣದಲ್ಲಿರುವ ನಿಗಮದಲ್ಲಿ ಹುದ್ದೆ ಹೊಂದಿರುವ ಅಥವಾ ಹಿಂದೆ ಹೊಂದಿದ ಅಭ್ಯರ್ಥಿಗಳಿಗೆ. | ಸೇವೆ ಸಲ್ಲಿಸಿರುವಷ್ಟು ವರ್ಷಗಳು ಅಥವಾ 10 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು. |
| (ಆ) | ಮಾಜಿ ಸೈನಿಕನಾಗಿದ್ದಲ್ಲಿ. | ಸೇವೆ ಸಲ್ಲಿಸಿರುವಷ್ಟು ವರ್ಷಗಳಿಗೆ ಮೂರು ವರ್ಷಗಳನ್ನು ಸೇರಿಸಿದರೆ ಎಷ್ಟು ವರ್ಷಗಳಾಗುವುದೋ ಅಷ್ಟು ವರ್ಷಗಳು. |
| (ಇ) | ನ್ಯಾಷನಲ್ ಕ್ಯಾಡೆಟ್ ಕೋರ್‌ನಲ್ಲಿ ಪೂರ್ಣಕಾಲಿಕ ಪರಿವೀಕ್ಷಕರಾಗಿ ಸೇವೆ ಸಲ್ಲಿಸಿ ಬಿಡುಗಡೆಯಾಗಿರುವ ವ್ಯಕ್ತಿಗಳಿಗೆ. | ಕ್ಯಾಡೆಟ್ ಪರಿವೀಕ್ಷಕನಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು. |
| (ಈ) | ರಾಜ್ಯ ಸರ್ಕಾರದಿಂದ ಪುರಸ್ಕೃತವಾದ ಗ್ರಾಮೀಣ ವಿದ್ಯುದೀಕರಣ ಯೋಜನೆಯ ಮೇರೆಗೆ ನೇಮಕಗೊಂಡ ಗ್ರಾಮ ಸಮೂಹ ಪರಿಶೀಲಕನಾಗಿ ಈಗ ಕೆಲಸ ಮಾಡುತ್ತಿದ್ದರೆ ಅಥವಾ ಹಿಂದೆ ಇದ್ದ ಅಭ್ಯರ್ಥಿಗಳಿಗೆ. | ಗ್ರಾಮ ಸಮೂಹ ಪರಿಶೀಲಕನಾಗಿ ಸೇವೆ ಸಲ್ಲಿಸಿದಷ್ಟು ವರ್ಷಗಳು. |
| (ಉ) | ಅಂಗವಿಕಲ ಅಭ್ಯರ್ಥಿಗಳಿಗೆ | 10 ವರ್ಷಗಳು |

| | | |
|---|---|---|
| (ಊ) | ಕರ್ನಾಟಕ ರಾಜ್ಯದಲ್ಲಿರುವ ಭಾರತ ಸರ್ಕಾರದ ಜನಗಣತಿ ಸಂಸ್ಥೆಯಲ್ಲಿ ಈಗ ಹುದ್ದೆಯನ್ನು ಹೊಂದಿದ್ದರೆ ಅಥವಾ ಹಿಂದೆ ಹೊಂದಿದ್ದ ಅಭ್ಯರ್ಥಿಗಳಿಗೆ. | ಸೇವೆ ಸಲ್ಲಿಸಿರುವ ವರ್ಷಗಳು ಅಥವಾ 5 ವರ್ಷಗಳ ಅವಧಿ ಅದರಲ್ಲಿ ಯಾವುದು ಕಡಿಮೆಯೋ ಅಷ್ಟು ವರ್ಷಗಳು. |
| (ಋ) | ವಿಧವೆಯಾಗಿದ್ದಲ್ಲಿ (ಅಭ್ಯರ್ಥಿಯು ಸಕ್ಷಮ ಪ್ರಾಧಿಕಾರದಿಂದ ತಾನು ವಿಧವೆಯೆಂದು ಹಾಗೂ ಮರು ಮದುವೆಯಾಗಿರುವುದಿಲ್ಲವೆಂಬ ಪ್ರಮಾಣ ಪತ್ರವನ್ನು ಪಡೆದಿಟ್ಟುಕೊಂಡು ಆಯೋಗವು ಸೂಚಿಸಿದಾಗ ಇದರ ಮೂಲ ಪ್ರತಿಯನ್ನು ಪರಿಶೀಲನೆಗೆ ಹಾಜರುಪಡಿಸಬೇಕು) | 10 ವರ್ಷಗಳು. |
| (ೠ) | ಜೀತ ಕಾರ್ಮಿಕನಾಗಿದ್ದ ಪಕ್ಷದಲ್ಲಿ ಸದರಿ ಅಧಿನಿಯಮ ಅಥವಾ 1957ರ ಕರ್ನಾಟಕ ಜೀತ ಕಾರ್ಮಿಕ ಪದ್ಧತಿ (ರದ್ದಿಯಾತಿ) ಆದೇಶದ ಮೇರೆಗೆ ಜೀತ ಸಾಲವನ್ನು ಸಂದಾಯ ಮಾಡುವ ಹೊಣೆಯಿಂದ ಬಿಡುಗಡೆಯಾಗಿದ್ದಾನೆಂದು ಪ್ರಮಾಣ ಪತ್ರವನ್ನು ಜಿಲ್ಲಾ ಮ್ಯಾಜಿಸ್ಟ್ರೇಟ್‌ರಿಂದ ಪಡೆದಿಟ್ಟುಕೊಂಡು ಆಯೋಗವು ಸೂಚಿಸಿದಾಗ ಇದರ ಮೂಲ ಪ್ರತಿಯನ್ನು ಪರಿಶೀಲನೆಗೆ ಹಾಜರುಪಡಿಸಬೇಕು. | 10 ವರ್ಷಗಳು. |
| (ಎ) | ಆಯೋಗದ ದಿನಾಂಕ: 17-05-2011ರ ಅಧಿಸೂಚನೆಗೆ ಉತ್ತರವಾಗಿ ಮೋಟಾರು ವಾಹನ ನಿರೀಕ್ಷಕರ ಹುದ್ದೆಗೆ ಅರ್ಜಿ ಸಲ್ಲಿಸಿ, ಶುಲ್ಕ ಸಂದಾಯ ಮಾಡಿರುವ ಅಭ್ಯರ್ಥಿಗಳಿಗೆ ಮಾತ್ರ | ಸರ್ಕಾರದ ಆದೇಶ ಸಂಖ್ಯೆ: ಸಾರಿಇ 203 ಸಾಇಸೇ 2014 ದಿನಾಂಕ: 06-03-2015 ರನ್ವಯ ಗರಿಷ್ಠ 04 ವರ್ಷಗಳು. |

7. <u>ಜಾತಿ / ಮೀಸಲಾತಿ ಪ್ರಮಾಣ ಪತ್ರಗಳು</u> :-

ಮೀಸಲಾತಿ ಕೋರಬಯಸುವ ಅಭ್ಯರ್ಥಿಗಳು ಈ ಕೆಳಗೆ ನಮೂದಿಸಿರುವ ನಮೂನೆಗಳಲ್ಲಿಯೇ ಮೀಸಲಾತಿ ಪ್ರಮಾಣ ಪತ್ರಗಳನ್ನು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು:-

ಅ) ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಕ್ಕೆ ಸೇರಿದ ಅಭ್ಯರ್ಥಿಗಳು:- ನಮೂನೆ ' ಡಿ '

ಆ) ಪ್ರವರ್ಗ-1 ಕ್ಕೆ ಸೇರಿದ ಅಭ್ಯರ್ಥಿಗಳು:- ನಮೂನೆ ' ಇ '

ಇ) ಪ್ರವರ್ಗ-2ಎ, 2ಬಿ, 3ಎ ಮತ್ತು 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು:- ನಮೂನೆ 'ಎಫ್'

ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರುವ ಮೀಸಲಾತಿ ಪ್ರಮಾಣ ಪತ್ರವನ್ನು ಸಂಬಂಧಿತ ತಹಸೀಲ್ದಾರ್‌ರವರಿಂದ ಅಂದರೆ ತಹಶೀಲ್ದಾರ್‌ರವರ ಸಹಿ ಮತ್ತು ಮೊಹರು ಅಥವಾ ಬಾರ್ ಕೋಡ್, ಹಾಲೋಗ್ರಾಮ್ ಮತ್ತು ವಾಟರ್ ಮಾರ್ಕ್‌ನೊಂದಿಗೆ ಪಡೆದಿಟ್ಟುಕೊಂಡಿರತಕ್ಕದ್ದು. ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ ಮತ್ತು ಪ್ರವರ್ಗ-1ರ ಮೀಸಲಾತಿ ಪ್ರಮಾಣ ಪತ್ರಗಳು ರದ್ದಾಗುವವರೆಗೂ ಚಾಲ್ತಿಯಲ್ಲಿರುವುದರಿಂದ ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ನಿಗದಿಪಡಿಸಿದ ನಮೂನೆಯಲ್ಲಿ ಪಡೆದಿಟ್ಟುಕೊಂಡಿರತಕ್ಕದ್ದು. ಹಿಂದುಳಿದ ವರ್ಗಗಳ ಪ್ರವರ್ಗ-2ಎ, ಪ್ರವರ್ಗ-2ಬಿ, ಪ್ರವರ್ಗ-3ಎ ಮತ್ತು ಪ್ರವರ್ಗ-3ಬಿ ವರ್ಗದ ಮೀಸಲಾತಿ ಪ್ರಮಾಣ ಪತ್ರಗಳು 5 ವರ್ಷ ಚಾಲ್ತಿಯಲ್ಲಿರುತ್ತವೆ. ಅಭ್ಯರ್ಥಿಗಳು ಪಡೆದಿರುವ ಪ್ರಮಾಣ ಪತ್ರವು ಅರ್ಜಿ ಸಲ್ಲಿಸಲು ನಿಗದಿಪಡಿಸಿದ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರಬೇಕು. ಮೂಲ ದಾಖಲಾತಿ ಪರಿಶೀಲನೆಗೆ ಅರ್ಹರಾದಾಗ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರುವ ಮೀಸಲಾತಿ ಪ್ರಮಾಣ ಪತ್ರದ ಮೂಲ ಪ್ರತಿಯನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಮೀಸಲಾತಿಯನ್ನು ರದ್ದುಪಡಿಸಿ ಅವರ ಅಭ್ಯರ್ಥಿತನವನ್ನು ಸಾಮಾನ್ಯ ಅರ್ಹತೆಯಡಿಯಲ್ಲಿ ಅರ್ಹರಾದಲ್ಲಿ ಮಾತ್ರ ಪರಿಗಣಿಸಲಾಗುವುದು. ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಅಧಿಸೂಚನೆಯ ಕೊನೆಯಲ್ಲಿ ತೋರಿಸಲಾಗಿದೆ. ಈ ನಮೂನೆಗಳನ್ನು ಹೊರತುಪಡಿಸಿ ಇತರೆ ಯಾವುದೇ ನಮೂನೆಗಳಲ್ಲಿ ಪಡೆಯಲಾದ ಮೀಸಲಾತಿ ಪ್ರಮಾಣ ಪತ್ರಗಳನ್ನು ತಿರಸ್ಕರಿಸಲಾಗುವುದು.

8. <u>ಮಾಜಿ ಸೈನಿಕ</u>

ಸರ್ಕಾರದ ಅಧಿಸೂಚನೆ ಸಂಖ್ಯೆ ಡಿಪಿಎಆರ್ 13 ಎಸ್‌ಆರ್‌ಆರ್ 92 ದಿನಾಂಕ 01-04-1992 ಮತ್ತು ಅಧಿಸೂಚನೆ ಸಂಖ್ಯೆ ಡಿಪಿಎಆರ್ 28 ಎಸ್‌ಆರ್‌ಆರ್ 95 ದಿನಾಂಕ 21-10-1995 ರನ್ವಯ ನೇರ ನೇಮಕಾತಿಗಳಲ್ಲಿ ಶೇಕಡ 10 ರಷ್ಟು ಹುದ್ದೆಗಳನ್ನು ಮಾಜಿ ಸೈನಿಕರಿಗೆ ಮೀಸಲಾತಿ ಕಲ್ಪಿಸಲಾಗಿದೆ. ಕರ್ನಾಟಕ ರಾಜ್ಯ ಸಿವಿಲ್ ಸೇವೆಗಳು (ಸಾಮಾನ್ಯ ನೇಮಕಾತಿ) ನಿಯಮಗಳು, 1977 ರಲ್ಲಿದ್ದಂತೆ ಮಾಜಿ ಸೈನಿಕರ ವಿವರಣೆ ಕೆಳಕಂಡಂತಿದೆ:

(1) ಮಾಜಿ ಸೈನಿಕ ಎಂದರೆ ಕೇಂದ್ರ ಸಶಸ್ತ್ರ ದಳಗಳಾದ ನಿಯಮಿತ ಭೂದಳ, ನೌಕಾದಳ ಮತ್ತು ವಾಯು ದಳದಲ್ಲಿ ಯಾವುದೇ ಶ್ರೇಣಿಯಲ್ಲಿ (ಯೋಧ ಅಥವಾ ಯೋಧನಲ್ಲದ) ಸೇವೆ ಸಲ್ಲಿಸಿದ ವ್ಯಕ್ತಿ ಆದರೆ ಡಿಫೆನ್ಸ್ ಸೆಕ್ಯೂರಿಟಿ ಕೋರ್, ಜನರಲ್ ರಿಸರ್ವ್ ಇಂಜಿನಿಯರಿಂಗ್ ಫೋರ್ಸ್, ಲೋಕ ಸಹಾಯಕ ಸೇವೆ ಮತ್ತು ಪ್ಯಾರಾ ಮಿಲಿಟರಿ ದಳದಲ್ಲಿ ಸೇವೆ ಸಲ್ಲಿಸಿದ ವ್ಯಕ್ತಿ ಸೇರ್ಪಡೆಯಾಗುವುದಿಲ್ಲ ಮತ್ತು

(2) ಕೇಂದ್ರ ಸಶಸ್ತ್ರ ದಳಗಳಲ್ಲಿ ಸೇವೆ ಸಲ್ಲಿಸುವಾಗ ಕೊಲ್ಲಲ್ಪಟ್ಟ ಅಥವಾ ಶಾಶ್ವತವಾಗಿ ದೈಹಿಕ ವಿಕಲತೆ ಹೊಂದಿದ ವ್ಯಕ್ತಿಗಳ ಕುಟುಂಬದವರು (ಸಂದರ್ಭಾನುಸಾರ ಹೆಂಡತಿ ಅಥವಾ ಗಂಡ ಮತ್ತು ಮಕ್ಕಳು ಮತ್ತು ಮಲ ಮಕ್ಕಳು) ಮಾಜಿ ಸೈನಿಕ ಮೀಸಲಾತಿಗೆ ಅರ್ಹರಾಗಿರುತ್ತಾರೆ. ಆದರೆ ಅಂತಹವರುಗಳಿಗೆ ವಯೋಮಿತಿ ಸಡಿಲಿಕೆಯನ್ನು ನೀಡಲಾಗುವುದಿಲ್ಲ.

ಅ) ಅಂತಹ ಸೇವೆಯಿಂದ ನಿವೃತ್ತಿ ಹೊಂದಿದ ನಂತರ ನಿವೃತ್ತಿ ವೇತನ ಪಡೆಯುತ್ತಿರುವ

ಅಥವಾ

ಆ) ವೈದ್ಯಕೀಯ ಕಾರಣಗಳಿಂದ ಮಿಲಿಟರಿ ಸೇವೆಯಿಂದ ಬಿಡುಗಡೆಯಾದ ಅಥವಾ ವ್ಯಕ್ತಿಯ ಹಿಡಿತಕ್ಕೂ ಮೀರಿದ ಪರಿಸ್ಥಿತಿಗಳಿಂದ ಮತ್ತು ವೈದ್ಯಕೀಯ ಅಥವಾ ಅಸಾಮರ್ಥ್ಯದ ಪಿಂಚಣಿ ಪಡೆದು ಅಂತಹ ಸೇವೆಯಿಂದ ಬಿಡುಗಡೆಯಾದವನು

ಅಥವಾ

ಇ) ಸ್ವಂತ ಕೋರಿಕೆ ಹೊರತುಪಡಿಸಿ ಸಿಬ್ಬಂದಿ ಕಡಿತದ ಪರಿಣಾಮದಿಂದ ಅಂತಹ ಸೇವೆಯಿಂದ ಬಿಡುಗಡೆ ಹೊಂದಿದ ವ್ಯಕ್ತಿ.

ಅಥವಾ

ಈ) ತನ್ನ ಸ್ವಂತ ಕೋರಿಕೆ ಮೇರೆಗೆ ಅಥವಾ ದುರ್ನಡತೆ ಅಥವಾ ಅಸಾಮರ್ಥ್ಯದ ಕಾರಣದಿಂದಾಗಿ ತೆಗೆದುಹಾಕಿರುವ ಅಥವಾ ಕರ್ತವ್ಯದಿಂದ ವಜಾ ಮಾಡಿದ ವ್ಯಕ್ತಿಗಳನ್ನು ಹೊರತುಪಡಿಸಿ, ನಿರ್ದಿಷ್ಟ ಅವಧಿಯನ್ನು ಪೂರೈಸಿದ ತರುವಾಯ ಬಿಡುಗಡೆ ಹೊಂದಿದ ವ್ಯಕ್ತಿ ಮತ್ತು ಗ್ರಾಚ್ಯುಟಿ ಪಡೆಯುತ್ತಿರುವ ವ್ಯಕ್ತಿ ಮತ್ತು ಪ್ರಾಂತೀಯ ಸೇವೆಯ ಈ ಕೆಳಗೆ ಹೆಸರಿಸಿದ ವರ್ಗದ ಸಿಬ್ಬಂದಿಯವರು:-

i) ನಿರಂತರ ಸೇವೆ ಸಲ್ಲಿಸಿದ ನಿವೃತ್ತಿ ಹೊಂದಿದ ಪಿಂಚಣಿದಾರರು.

ii) ಮಿಲಿಟರಿ ಸೇವೆಯಿಂದಾಗಿ ಉಂಟಾದ ದೈಹಿಕ ಅಸಾಮರ್ಥ್ಯತೆ ಹೊಂದಿ ಬಿಡುಗಡೆಯಾದ ವ್ಯಕ್ತಿ.

iii) ಗ್ಯಾಲಂಟ್ರಿ ಪ್ರಶಸ್ತಿ ವಿಜೇತರು.

ವಿವರಣೆ:- ಕೇಂದ್ರ ಸಶಸ್ತ್ರ ದಳದಲ್ಲಿ ಸೇವೆಯಲ್ಲಿರುವ ವ್ಯಕ್ತಿಗಳು ಸೇವೆಯಿಂದ ನಿವೃತ್ತಿ ಹೊಂದಿದ ನಂತರ ಮಾಜಿ ಸೈನಿಕರ ವರ್ಗದಡಿ ಬರುವ ವ್ಯಕ್ತಿಗೆ ನಿರ್ದಿಷ್ಟ ಒಪ್ಪಂದವು ಪೂರ್ಣವಾಗಲು ಒಂದು ವರ್ಷಕ್ಕೆ ಮುನ್ನ ಪುನರ್ ಉದ್ಯೋಗಕ್ಕೆ ಅರ್ಜಿ ಹಾಕಿಕೊಳ್ಳಲು ಹಾಗೂ ಅವರಿಗೆ ಮಾಜಿ ಸೈನಿಕರಿಗೆ ದೊರೆಯುವ ಎಲ್ಲಾ ಸೌಲಭ್ಯಗಳನ್ನು ಹೊಂದಲು ಅನುಮತಿ ನೀಡಲಾಗಿದೆ. ಆದರೆ ಸಮವಸ್ತ್ರವನ್ನು ತ್ಯಜಿಸಲು ಅನುಮತಿ ನೀಡುವವರೆಗೆ ರಾಜ್ಯ ನಾಗರೀಕ ಸೇವೆ ಅಥವಾ ಹುದ್ದೆಗೆ ನೇಮಕ ಹೊಂದುವಂತಿಲ್ಲ. ಇಂತಹವರು ಅರ್ಜಿ ಸಲ್ಲಿಸುವ ಮುನ್ನ ಸೇನೆಯಿಂದ ನಿರಾಕ್ಷೇಪಣಾ ಪತ್ರ ಪಡೆದು ಸಲ್ಲಿಸಬೇಕು. ಸೇನೆಯಿಂದ ಬಿಡುಗಡೆಯಾದ ವ್ಯಕ್ತಿಗಳು ಅವರ ಬಿಡುಗಡೆ ಪ್ರಮಾಣ ಪತ್ರವನ್ನು / ಮಾಜಿ ಸೈನಿಕರ ಅವಲಂಬಿತರು ಮಾಜಿ ಸೈನಿಕರು ಸೇವೆಯಲ್ಲಿದ್ದಾಗ ಕೊಲ್ಲಲ್ಪಟ್ಟಿರುವ / ಶಾಶ್ವತವಾಗಿ ಅಂಗವಿಕಲರಾದ ಬಗ್ಗೆ ಪ್ರಮಾಣ ಪತ್ರವನ್ನು ಮೂಲ ದಾಖಲಾತಿ ಪರಿಶೀಲನೆಗೆ ತಪ್ಪದೆ ಹಾಜರುಪಡಿಸಬೇಕು.

**9. ಗ್ರಾಮೀಣ ಅಭ್ಯರ್ಥಿ:-**

ಸರ್ಕಾರಿ ಅಧಿಸೂಚನೆ ಸಂಖ್ಯೆ ಸಂವ್ಯಶಾಇ 59 ಶಾಸನ 2000 ದಿನಾಂಕ 06-01-2001 ರನ್ವಯ ಗ್ರಾಮೀಣ ಮೀಸಲಾತಿಯಡಿ ಅರ್ಜಿ ಸಲ್ಲಿಸುವಂತಹ ಅಭ್ಯರ್ಥಿಗಳು ನಿಯಮಗಳ ರೀತ್ಯಾ 1 ರಿಂದ 10ನೇ ತರಗತಿಯವರೆಗೆ ಗ್ರಾಮೀಣ ಮೀಸಲಾತಿಗೆ ಒಳಪಡುವ ಪ್ರದೇಶಗಳಲ್ಲಿ ವ್ಯಾಸಂಗ ಮಾಡಿ ಉತ್ತೀರ್ಣರಾದಲ್ಲಿ ಮಾತ್ರ ಈ ಮೀಸಲಾತಿಯನ್ನು ಪಡೆಯಲು ಅರ್ಹರು. ಗ್ರಾಮೀಣ ಅಭ್ಯರ್ಥಿ ಗಳಿಗೆಂದು ಮೀಸಲಿರಿಸಿದ ಹುದ್ದೆಗಳಿಗೆ ಅರ್ಜಿ ಸಲ್ಲಿಸುವ ಸಾಮಾನ್ಯ ಅರ್ಹತೆಯ ಅಭ್ಯರ್ಥಿಗಳು ಸರ್ಕಾರಿ ಆದೇಶ ಸಂಖ್ಯೆ ಸಿಆಸುಇ 08 ಸೆನೆನಿ 2001 ದಿನಾಂಕ 13-02-2001 ರನ್ವಯ ನಮೂನೆ-2ನ್ನು ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ / ಕ್ಷೇತ್ರ ಶಿಕ್ಷಣಾಧಿಕಾರಿಯವರ ಮೇಲುರುಜುವಿನೊಂದಿಗೆ ಹಾಗೂ ಈ ಪ್ರಮಾಣ ಪತ್ರವಲ್ಲದೇ ಮೇಲುಸ್ತರಕ್ಕೆ ಸೇರಿಲ್ಲದಿರುವ ಬಗ್ಗೆ ನಮೂನೆ-1ರಲ್ಲಿ ಪ್ರಮಾಣ ಪತ್ರವನ್ನು ಕಡ್ಡಾಯವಾಗಿ ಸಂಬಂಧಿತ ತಹಶೀಲ್ದಾರ್‌ರವರಿಂದ ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರ ತಕ್ಕದ್ದು. ಅಂತೆಯೇ ಗ್ರಾಮೀಣ ಮೀಸಲಾತಿ ಕೋರುವ ಪರಿಶಿಷ್ಟ ಜಾತಿ, ಪರಿಶಿಷ್ಟ ಪಂಗಡ, ಪ್ರವರ್ಗ-1, ಪ್ರವರ್ಗ-2ಎ, 2ಬಿ, 3ಎ, 3ಬಿ ಮೀಸಲಾತಿಗೆ ಸೇರಿದ ಅಭ್ಯರ್ಥಿಗಳು ಕಡ್ಡಾಯವಾಗಿ ಗ್ರಾಮೀಣ ಮೀಸಲಾತಿಯ ಪ್ರಮಾಣ ಪತ್ರವನ್ನು ನಮೂನೆ-2ರಲ್ಲಿ ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ/ ಕ್ಷೇತ್ರ ಶಿಕ್ಷಣಾಧಿಕಾರಿಯವರ ಮೇಲು ರುಜು ಪಡೆದಿಟ್ಟುಕೊಂಡಿರತಕ್ಕದ್ದು. ಮೂಲ ದಾಖಲಾತಿ ಪರಿಶೀಲನೆಗೆ ಅರ್ಹರಾದಾಗ ಕೊನೆಯ ದಿನಾಂಕದಂದು ಚಾಲ್ತಿಯಲ್ಲಿರುವ ಮೀಸಲಾತಿ ಪ್ರಮಾಣ ಪತ್ರದ ಮೂಲ ಪ್ರತಿಯನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು. ಮೂಲ ದಾಖಲಾತಿ ಪರಿಶೀಲನೆಗೆ ಅರ್ಹರಾದಾಗ ಇದೇ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಗ್ರಾಮೀಣ ಮೀಸಲಾತಿಯನ್ನು ರದ್ದುಪಡಿಸಲಾಗುವುದು. (ಅಭ್ಯರ್ಥಿಗಳ ನೇರ ಮೀಸಲಾತಿ ಪ್ರಮಾಣ ಪತ್ರಗಳು ತಿರಸ್ಕೃತಗೊಂಡಲ್ಲಿ ಅಂತಹವರು ಗ್ರಾಮೀಣ ಮೀಸಲಾತಿಗೆ ಸಹ ಅನರ್ಹರಾಗುತ್ತಾರೆ. (ಈ ಪ್ರಮಾಣ ಪತ್ರಗಳ ನಮೂನೆಗಳನ್ನು ಅಧಿಸೂಚನೆಯ ಕೊನೆಯಲ್ಲಿ ತೋರಿಸಲಾಗಿದೆ).

**10 ಕನ್ನಡ ಮಾಧ್ಯಮ ಅಭ್ಯರ್ಥಿ**

ಸರ್ಕಾರಿ ಅಧಿಸೂಚನೆ ಸಂಖ್ಯೆ ಸಿಆಸುಇ 71 ಸೆನೆನಿ 2001 ದಿನಾಂಕ 24-10-2002 ರನ್ವಯ ಕನ್ನಡ ಮಾಧ್ಯಮದ ಅಭ್ಯರ್ಥಿಗಳಿಗೆಂದು ಮೀಸಲಿರಿಸಿದ ಹುದ್ದೆಗಳಿಗೆ ಅರ್ಜಿ ಸಲ್ಲಿಸುವಂತಹ ಅಭ್ಯರ್ಥಿಗಳು 1ನೇ ತರಗತಿಯಿಂದ 10ನೇ ತರಗತಿಯವರೆಗೆ ಕನ್ನಡ ಮಾಧ್ಯಮದಲ್ಲಿ ವ್ಯಾಸಂಗ ಮಾಡಿರುವ ಬಗ್ಗೆ ಸಂಬಂಧಪಟ್ಟ ಶಾಲೆಯ ಮುಖ್ಯೋಪಾಧ್ಯಾಯರ ಸಹಿ ಹಾಗೂ ಮೊಹರಿನೊಂದಿಗೆ ಪ್ರಮಾಣ ಪತ್ರವನ್ನು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು ಹಾಗೂ ಮೂಲ ದಾಖಲಾತಿ ಪರಿಶೀಲನೆಗೆ ಅರ್ಹರಾದಾಗ ಇದೇ ಪ್ರಮಾಣ ಪತ್ರಗಳ ಮೂಲ ಪ್ರತಿಗಳನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು. ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಕ.ಮಾ.ಅ. ಮೀಸಲಾತಿಯನ್ನು ರದ್ದುಪಡಿಸಲಾಗುವುದು. (ಈ ಪ್ರಮಾಣ ಪತ್ರದ ನಮೂನೆಯನ್ನು ಅಧಿಸೂಚನೆಯ ಕೊನೆಯಲ್ಲಿ ತೋರಿಸಲಾಗಿದೆ).

**11. ಅಂಗವಿಕಲ ಅಭ್ಯರ್ಥಿ**

ಸರ್ಕಾರದ ಅಧಿಸೂಚನೆ ಸಂಖ್ಯೆ: ಡಿಪಿಎಆರ್ 50 ಎಸ್‌ಆರ್‌ಆರ್ 2000 ದಿನಾಂಕ 03-09-2005 ರಲ್ಲಿ ರಾಜ್ಯ ಸಿವಿಲ್ ಸೇವೆಗಳ ಸಮೂಹ -'ಎ' ಮತ್ತು 'ಬಿ' ಗುಂಪಿನ ಹುದ್ದೆಗಳಿಗೆ ಶೇಕಡ 3 ರಷ್ಟು ಮತ್ತು ಸಮೂಹ 'ಸಿ' ಗುಂಪಿನ ಹುದ್ದೆಗಳಿಗೆ ಶೇಕಡ 5 ರಷ್ಟು ಹುದ್ದೆಗಳನ್ನು ಅಂಗವಿಕಲರಿಗೆ ಮೀಸಲಾತಿ ಕಲ್ಪಿಸಿದ್ದು, ಇದರನ್ವಯ ಶೇಕಡ 40 ಕ್ಕಿಂತ ಕಡಿಮೆ ಇಲ್ಲದಂತಹ ಅಂಗವಿಕಲತೆಯುಳ್ಳ ಅಭ್ಯರ್ಥಿಗಳು ಮಾತ್ರ ಈ ಮೀಸಲಾತಿಯನ್ನು ಕೋರಲು ಅರ್ಹರು. ಸರ್ಕಾರದ ಅಧಿಕೃತ ಜ್ಞಾಪನ ಸಂಖ್ಯೆ ಸಿಆಸುಇ 115 ಸೆನೆನಿ 2005 ದಿನಾಂಕ 19-11-2005ರಲ್ಲಿ ನಿಗದಿಪಡಿಸಿರುವ ನಮೂನೆಯಲ್ಲಿ ಅಂಗವಿಕಲತೆ ಬಗ್ಗೆ ಸರ್ಕಾರದ ಆದೇಶ ಸಂಖ್ಯೆ: ಮಮಇ 65 ಪಿಹೆಚ್‌ಪಿ 2010 ದಿನಾಂಕ 18-02-2011ರಂತೆ ಪ್ರಾಥಮಿಕ ಆರೋಗ್ಯ ಕೇಂದ್ರದಲ್ಲಿಯ ವೈದ್ಯಕೀಯ ಪ್ರಾಧಿಕಾರ/ತಾಲ್ಲೂಕು ಮಟ್ಟದ ವೈದ್ಯಕೀಯ ಪ್ರಾಧಿಕಾರ/ಜಿಲ್ಲಾ ಮಟ್ಟದ ವೈದ್ಯಕೀಯ ಪ್ರಾಧಿಕಾರ/ ಬೆಂಗಳೂರು ವೈದ್ಯಕೀಯ ಪ್ರಾಧಿಕಾರ ಇವರಿಂದ ಪ್ರಮಾಣ ಪತ್ರವನ್ನು ನಿಗದಿಪಡಿಸಿದ ಕೊನೆಯ ದಿನಾಂಕದೊಳಗೆ ಪಡೆದಿಟ್ಟುಕೊಂಡಿರತಕ್ಕದ್ದು. ಮೂಲ ದಾಖಲಾತಿಗಳ ಪರಿಶೀಲನೆಗೆ ಅರ್ಹರಾದಾಗ ಈ ಪ್ರಮಾಣ ಪತ್ರದ ಮೂಲ ಪ್ರತಿಯನ್ನು ಪರಿಶೀಲನೆಗೆ ತಪ್ಪದೇ ಹಾಜರುಪಡಿಸತಕ್ಕದ್ದು, ತಪ್ಪಿದಲ್ಲಿ ಅಂತಹ ಅಭ್ಯರ್ಥಿಗಳ ಅಂಗವಿಕಲ ಮೀಸಲಾತಿಯನ್ನು ರದ್ದುಪಡಿಸಲಾಗುವುದು. ಇತರೆ ಯಾವುದೇ ನಮೂನೆಯಲ್ಲಿ ಅಂಗವಿಕಲತೆಯ ಬಗ್ಗೆ ಪಡೆಯಲಾಗಿರುವ ಪ್ರಮಾಣ ಪತ್ರಗಳನ್ನು / ಗುರುತಿನ ಚೀಟಿಯ ಪ್ರತಿಗಳನ್ನು ಪರಿಗಣಿಸಲು ಬರುವುದಿಲ್ಲ. (ಈ ಪ್ರಮಾಣ ಪತ್ರದ ನಮೂನೆಯನ್ನು ಅಧಿಸೂಚನೆಯ ಕೊನೆಯಲ್ಲಿ ತೋರಿಸಲಾಗಿದೆ).

V-F-12(*)




ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ, ಡಾ. ಬಿ. ಆರ್. ಅಂಬೇಡ್ಕರ್ ರಸ್ತೆ,
ಬೆಂಗಳೂರು –560001. ದೂ. 22034319

ಸಂಖ್ಯೆ: ಸಿಐ 33 ಸಪ್ರಕೈ 2020 ದಿನಾಂಕ: 20.05.2020.

ಇವರಿಂದ:

ಸರ್ಕಾರದ ಪ್ರಧಾನ ಕಾರ್ಯದರ್ಶಿ,
(ಎಂ.ಎಸ್.ಎಂ.ಇ. & ಗಣಿ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ, ಬೆಂಗಳೂರು–01.

ಇವರಿಗೆ:

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನಸೌಧ, ಬೆಂಗಳೂರು–01.

ಮಾನ್ಯರೆ,

ವಿಷಯ:ಮಾನ್ಯ ಕರ್ನಾಟಕ ವಿಧಾನಸಭೆ ಸದಸ್ಯರಾದ ಶ್ರೀ ಎಸ್.ಎನ್. ನಾರಾಯಣಸ್ವಾಮಿ. ಕೆ.ಎಂ(ಬಂಗಾರಪೇಟೆ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2991ಕ್ಕೆ ಉತ್ತರಿಸುವ ಬಗ್ಗೆ.

* * * * *

ಮಾನ್ಯ ಕರ್ನಾಟಕ ವಿಧಾನಸಭೆ ಸದಸ್ಯರಾದ ಶ್ರೀ ಎಸ್.ಎನ್. ನಾರಾಯಣಸ್ವಾಮಿ. ಕೆ.ಎಂ (ಬಂಗಾರಪೇಟೆ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2991ಕ್ಕೆ ದಿನಾಂಕ: 24.03.2020 ರಂದು ಕರ್ನಾಟಕ ವಿಧಾನಸಭೆ, ವಿಧಾನಸೌಧ, ಬೆಂಗಳೂರು, ಇಲ್ಲಿ ಉತ್ತರಿಸಬೇಕಾಗಿದ್ದು, ಸದರಿ ಪ್ರಶ್ನೆಯ ಉತ್ತರಗಳ 25 ಪ್ರತಿಗಳನ್ನು ಈ ಪತ್ರದೊಂದಿಗೆ ಕಳುಹಿಸಿಕೊಡಲು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ,

Rlatha

(ಆರ್.ಲತಾ)
ಪೀಠಾಧಿಕಾರಿ(ಸಪ್ರಕೈ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

ಪ್ರತಿಯನ್ನು ಮಾಹಿತಿಗಾಗಿ:

1. ಮಾನ್ಯ ಮುಖ್ಯಮಂತ್ರಿಗಳ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು–01.
2. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿ, (ಎಂ.ಎಸ್.ಎಂ.ಇ. & ಗಣಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ವಿಕಾಸ ಸೌಧ, ಬೆಂಗಳೂರು–01.
3. ಸರ್ಕಾರದ ಅಧೀನ ಕಾರ್ಯದರ್ಶಿ (ಸಮನ್ವಯ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ವಿಕಾಸಸೌಧ, ಬೆಂಗಳೂರು–01.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2991
ವಿಧಾನ ಸಭೆ ಸದಸ್ಯರ ಹೆಸರು : ಶ್ರೀ ಎಸ್.ಎನ್.ನಾರಾಯಣಸ್ವಾಮಿ.ಕೆ.ಎಂ (ಬಂಗಾರಪೇಟೆ)
ಉತ್ತರಿಸುವವರು : ಮುಖ್ಯಮಂತ್ರಿಗಳು
ಉತ್ತರಿಸಬೇಕಾದ ದಿನಾಂಕ : 24-03-2020

| ಪ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಅ) | ಕೋಲಾರ ಜಿಲ್ಲೆಯಲ್ಲಿರುವ ಸಣ್ಣ ಕೈಗಾರಿಕಾ ಪ್ರದೇಶಗಳು ಎಷ್ಟು ಮತ್ತು ಅವರ ವಿಸ್ತೀರ್ಣ ಎಷ್ಟು; (ವಿವರ ನೀಡುವುದು) | ಕೋಲಾರ ಜಿಲ್ಲೆಯಲ್ಲಿ ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ನಿಗಮದಿಂದ ಅಭಿವೃದ್ಧಿ ಪಡಿಸಲಾದ ಕೈಗಾರಿಕಾ ವಸಾಹತುಗಳ ಹೆಸರು ಮತ್ತು ವಿಸ್ತೀರ್ಣ ಈ ಕೆಳಗಿನಂತಿದೆ. |

| ಸಂಖ್ಯೆ | ಕೈಗಾರಿಕಾ ವಸಾಹತುಗಳ ಹೆಸರು | ವಿಸ್ತೀರ್ಣ (ಎಕರೆಗಳಲ್ಲಿ) | ಸ್ಥಾಪನಾ ವರ್ಷ |
|---|---|---|---|
| 1. | ತಮಕ–ಕೋಲಾರ | 25.33 | 1983 |
| 2 | ಕೆ.ಜಿ.ಎಫ್. | 14.37 | 1962 |
| 3 | ಮಾಲೂರು | 6.34 | 1986 |
| 4 | ಮುಳಬಾಗಿಲು | 5.00 | 1986 |
| 5 | ಕ್ಯಾಲನೂರು | 5.00 | 1994 |

ಕೋಲಾರ ಜಿಲ್ಲೆಯಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಿಂದ ಅಭಿವೃದ್ಧಿಪಡಿಸಲಾದ ಕೈಗಾರಿಕಾ ಪ್ರದೇಶಗಳ ಹೆಸರು ಮತ್ತು ವಿಸ್ತೀರ್ಣ ಈ ಕೆಳಗಿನಂತಿದೆ.

| | |
|---|---|
| ಮಾಲೂರು 1 & 2ನೇ ಹಂತ | ವಿಸ್ತೀರ್ಣ 210.00 ಎಕರೆ |
| ಮಾಲೂರು 3ನೇ ಹಂತ | ವಿಸ್ತೀರ್ಣ 295.00 ಎಕರೆ |
| ಮಾಲೂರು 4ನೇ ಹಂತ | ವಿಸ್ತೀರ್ಣ 411.79 ಎಕರೆ |
| ತಮಕ ಕೈ.ಪ್ರ. | ವಿಸ್ತೀರ್ಣ 117.01 ಎಕರೆ |
| ಬಂಗಾರಪೇಟೆ ಕೈ.ಪ್ರ. | ವಿಸ್ತೀರ್ಣ 88.00 ಎಕರೆ |
| ನರಸಾಪುರ ಕೈ.ಪ್ರ. | ವಿಸ್ತೀರ್ಣ 700.75 ಎಕರೆ |
| ಜಕ್ಕಸಂದ್ರ ಕೈ.ಪ್ರ. | ವಿಸ್ತೀರ್ಣ 627.45 ಎಕರೆ |
| ವೇಮಗಲ್ ಕೈ.ಪ್ರ. | ವಿಸ್ತೀರ್ಣ 666.41 ಎಕರೆ |
| **ಒಟ್ಟು** | **3116.41 ಎಕರೆ** |

| ಪ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಆ) | ಲಭ್ಯವಿರುವ ಕೈಗಾರಿಕಾ ಪ್ರದೇಶಗಳಲ್ಲಿ ಹಂಚಿಕೆ ಮಾಡಲಾದ ನಿವೇಶನಗಳ | ಕೋಲಾರ ಜಿಲ್ಲೆಯಲ್ಲಿ ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ನಿಗಮದಿಂದ ಅಭಿವೃದ್ಧಿಪಡಿಸಲಾದ ಕೈಗಾರಿಕಾ ವಸಾಹತುಗಳಲ್ಲಿ ಹಂಚಿಕೆ ಮಾಡಲಾದ ಕೈಗಾರಿಕಾ ನಿವೇಶನಗಳ ವಿವರಗಳು ಈ ಕೆಳಗಿನಂತಿವೆ: |

| ಪ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| | ಸಂಖ್ಯೆ ಎಷ್ಟು ಮತ್ತು ಖಾಲಿ ಉಳಿದಿರುವ ನಿವೇಶನಗಳು ಎಷ್ಟು; (ವಿವರ ನೀಡುವುದು) | |

| ಕ್ರಮ ಸಂಖ್ಯೆ | ಕೈಗಾರಿಕಾ ವಸಾಹತುಗಳ ಹೆಸರು | ಮಳಿಗೆ | | | ನಿವೇಶನ | | |
|---|---|---|---|---|---|---|---|
| | | ನಿರ್ಮಿಸಿರುವುದು | ಹಂಚಿಕೆ ಮಾಡಿರುವುದು | ಖಾಲಿ ಉಳಿದಿರುವುದು | ಅಭಿವೃದ್ಧಿ ಪಡಿಸಿರುವುದು | ಹಂಚಿಕೆ ಮಾಡಿರುವುದು | ಖಾಲಿ ಉಳಿದಿರುವುದು |
| 1. | ತಮಕ–ಕೋಲಾರ | 32 | 31 | 1 | 79 | 79 | – |
| 2 | ಕೆ.ಜಿ.ಎಫ್. | 42 | 42 | – | 11 | 9 | 2 |
| 3 | ಮಾಲೂರು | 16 | 15 | 1 | 17 | 17 | – |
| 4 | ಮುಳಬಾಗಿಲು | 10 | 10 | – | 12 | 12 | – |
| 5 | ಕ್ಯಾಲನೂರು | 10 | 10 | – | 3 | 3 | – |

ಕೋಲಾರ ಜಿಲ್ಲೆಯಲ್ಲಿ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಿಂದ ಹಂಚಿಕೆ ಮಾಡಲಾದ ಕೈಗಾರಿಕಾ ನಿವೇಶನಗಳ ವಿವರಗಳು ಈ ಕೆಳಗಿನಂತಿವೆ:

| ಕೈಗಾರಿಕಾ ಪ್ರದೇಶ | ಹಂಚಿಕೆ ಮಾಡುವ ವಿಸ್ತೀರ್ಣ (ಎಕರೆಗಳಲ್ಲಿ) | ಹಂಚಿಕೆಯಾದ ನಿವೇಶನಗಳ ಸಂಖ್ಯೆ | ಹಂಚಿಕೆಯಾದ ವಿಸ್ತೀರ್ಣ (ಎಕರೆಗಳಲ್ಲಿ) | ಖಾಲಿ ಉಳಿದಿರುವ ನಿವೇಶನಗಳ ಸಂಖ್ಯೆ | ವಿಸ್ತೀರ್ಣ (ಎಕರೆಗಳಲ್ಲಿ) |
|---|---|---|---|---|---|
| ಮಾಲೂರು 1 & 2ನೇ ಹಂತ | 184.56 | 126 | 184.56 | – | |
| ಮಾಲೂರು 3ನೇ ಹಂತ | 245.25 | 252 | 245.25 | – | |
| ಮಾಲೂರು 4ನೇ ಹಂತ | 294.83 | 183 | 283.44 | 13 | 11.39 |
| ತಮಕ ಕೈ.ಪ್ರ. | 99.17 | 63 | 99.17 | – | |
| ಬಂಗಾರಪೇಟೆ ಕೈ.ಪ್ರ. | 69.39 | 84 | 69.39 | – | |
| ನರಸಾಪುರ ಕೈ.ಪ್ರ. | 413.88 | 287 | 392.82 | 22 | 21.00 |
| ಜಕ್ಕಸಂದ್ರ ಕೈ.ಪ್ರ. | 464.00 | 88 | 220.65 | 134 | 254.65 |
| ವೇಮಗಲ್ ಕೈ.ಪ್ರ. | 366.59 | 155 | 281.11 | 46 | 85.48 |
| ಒಟ್ಟು | 2137.67 | 1238 | 1776.38 | 215 | 372.52 |

| ಪ್ರ.ಸಂ. | ಪ್ರಶ್ನೆ | ಉತ್ತರ |
|---|---|---|
| ಇ) | ಲಭ್ಯವಿರುವ ನಿವೇಶನಗಳ ಪೈಕಿ ಪರಿಶಿಷ್ಟ ಜಾತಿ ವರ್ಗಗಳ ಕೈಗಾರಿಕಾ ಉದ್ಯಮಿಗಳಿಗೆ ಮಂಜೂರು | ಕರ್ನಾಟಕ ರಾಜ್ಯ ಸಣ್ಣ ಕೈಗಾರಿಕೆಗಳ ಅಭಿವೃದ್ಧಿ ನಿಗಮ ವತಿಯಿಂದ ಕೋಲಾರ ಜಿಲ್ಲೆಯಲ್ಲಿ ಅಭಿವೃದ್ಧಿಪಡಿಸಲಾದ ಕೈಗಾರಿಕಾ ವಸಹಾತುಗಳಲ್ಲಿ ಪರಿಶಿಷ್ಟ ಜಾತಿ ಮತ್ತು ಪರಿಶಿಷ್ಟ ಪಂಗಡಗಳ ಕೈಗಾರಿಕಾ ಉದ್ಯಮಿಗಳಿಗೆ ಮಂಜೂರು ಮಾಡಲಾದ ನಿವೇಶನಗಳ ಸಂಖ್ಯೆ ಮತ್ತು ವಿಸ್ತೀರ್ಣ ಇತ್ಯಾದಿ ಈ ಕೆಳಕಂಡಂತಿವೆ: |

| ಪ್ರಸಂ. | ಪ್ರಶ್ನೆ | ಉತ್ತರ |
|---|---|---|
| | ಮಾಡಲಾದ ನಿವೇಶನಗಳು ಎಷ್ಟು ಮತ್ತು ವಿಸ್ತೀರ್ಣವೆಷ್ಟು? (ವಿವರ ನೀಡುವುದು) | (see tables below) |

| ಸಂಖ್ಯೆ | ಕೈಗಾರಿಕಾ ವಸಾಹತುಗಳ ಹೆಸರು | ಮಳಿಗೆ | | | | | ನಿವೇಶನ | | | | |
|---|---|---|---|---|---|---|---|---|---|---|---|
| | | ನಿರ್ಮಿಸಲಾಗಿದೆ | ಪರಿಶಿಷ್ಟ ಜಾತಿ ವರ್ಗದವರಿಗೆ ಹಂಚಿಕೆ ಮಾಡಲಾಗಿದೆ | ವಿಸ್ತೀರ್ಣ (ಚದರಮೀಟರ್‌ಗಳಲ್ಲಿ) | ಪರಿಶಿಷ್ಟ ಪಂಗಡದವರಿಗೆ ಹಂಚಿಕೆ ಮಾಡಲಾಗಿದೆ | ವಿಸ್ತೀರ್ಣ (ಚದರಮೀಟರ್‌ಗಳಲ್ಲಿ) | ಅಭಿವೃದ್ಧಿಪಡಿಸಲಾಗಿದೆ | ಪರಿಶಿಷ್ಟ ಜಾತಿ ವರ್ಗದವರಿಗೆ ಹಂಚಿಕೆ ಮಾಡಲಾಗಿದೆ | ವಿಸ್ತೀರ್ಣ (ಚದರಮೀಟರ್‌ಗಳಲ್ಲಿ) | ಪರಿಶಿಷ್ಟ ಪಂಗಡ ದವರಿಗೆ ಹಂಚಿಕೆ ಮಾಡಲಾಗಿದೆ | ವಿಸ್ತೀರ್ಣ (ಚದರಮೀಟರ್‌ಗಳಲ್ಲಿ) |
| 1. | ತಮಕ–ಕೋಲಾರ | 32 | – | – | – | – | 79 | 14 | 36724.00 | 1 | 2225.00 |
| 2 | ಕೆ.ಜಿ.ಎಫ್. | 42 | 4 | 2668.52 | – | – | 11 | 1 | 7000.00 | – | – |
| 3 | ಮಾಲೂರು | 16 | 3 | 1575.00 | – | – | 17 | 1 | 3753.00 | – | – |
| 4 | ಮುಳಬಾಗಿಲು | 10 | 2 | 1150.00 | – | – | 12 | 2 | 10118.00 | – | – |
| 5 | ಕ್ಯಾಲನೂರು | 10 | – | – | – | – | 3 | – | – | – | – |

ಕೋಲಾರ ಜಿಲ್ಲೆಯಲ್ಲಿ ಪರಿಶಿಷ್ಟ ಜಾತಿ ವರ್ಗಗಳ ಕೈಗಾರಿಕೋದ್ಯಮಿಗಳಿಗೆ ಕರ್ನಾಟಕ ಕೈಗಾರಿಕಾ ಪ್ರದೇಶಾಭಿವೃದ್ಧಿ ಮಂಡಳಿಯಿಂದ ಮಂಜೂರು ಮಾಡಲಾದ ನಿವೇಶನ ಮತ್ತು ಖಾಲಿ ನಿವೇಶನಗಳ ವಿವರ

| ಕೈಗಾರಿಕಾ ಪ್ರದೇಶ | ಹಂಚಿಕೆ ಮಾಡುವ ವಿಸ್ತೀರ್ಣ (ಎಕರೆಗಳಲ್ಲಿ) | ಹಂಚಿಕೆಯಾದ ನಿವೇಶನಗಳ ಸಂಖ್ಯೆ | ಹಂಚಿಕೆಯಾದ ವಿಸ್ತೀರ್ಣ (ಎಕರೆಗಳಲ್ಲಿ) | ಖಾಲಿ ಉಳಿದಿರುವ ನಿವೇಶನಗಳ ಸಂಖ್ಯೆ | ವಿಸ್ತೀರ್ಣ (ಎಕರೆಗಳಲ್ಲಿ) |
|---|---|---|---|---|---|
| ಮಾಲೂರು 1 & 2ನೇ ಹಂತ | 184.56 | 2 | 0.97 | – | – |
| ಮಾಲೂರು 3ನೇ ಹಂತ | 245.25 | – | – | – | – |
| ಮಾಲೂರು 4ನೇ ಹಂತ | 294.83 | 45 | 28.44 | 10 | 8.39 |
| ತಮಕ ಕೈ.ಪ್ರ. | 99.17 | 1 | 1.84 | – | – |
| ಬಂಗಾರಪೇಟೆ ಕೈ.ಪ್ರ. | 69.39 | 2 | 2.43 | – | – |
| ನರಸಾಪುರ ಕೈ.ಪ್ರ. | 413.88 | 75 | 29.25 | 18 | 11.00 |
| ಜಕ್ಕಸಂದ್ರ ಕೈ.ಪ್ರ. | 464.00 | 13 | 10.01 | 61 | 95.09 |
| ವೇಮಗಲ್ ಕೈ.ಪ್ರ. | 366.59 | 47 | 40.61 | 32 | 45.33 |
| **ಒಟ್ಟು** | **2137.67** | **180** | **113.55** | **121** | **159.81** |

**ಸಿಐ 33 ಸಪ್ರಕೈ 2020**

(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿ




ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ, ಡಾ. ಬಿ. ಆರ್. ಅಂಬೇಡ್ಕರ್ ರಸ್ತೆ,
ಬೆಂಗಳೂರು –560001. ದೂ. 22034319

ಸಂಖ್ಯೆ: ಸಿಐ 57 ಸಿಎಸ್‌ಸಿ 2020 ದಿನಾಂಕ: 19.05.2020.

**ಇವರಿಂದ:**

ಸರ್ಕಾರದ ಪ್ರಧಾನ ಕಾರ್ಯದರ್ಶಿ,
(ಎಂ.ಎಸ್.ಎಂ.ಇ. & ಗಣಿ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ, ಬೆಂಗಳೂರು–01.

**ಇವರಿಗೆ:**

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನಸೌಧ, ಬೆಂಗಳೂರು–01.

**ಮಾನ್ಯರೆ,**

**ವಿಷಯ:** ಮಾನ್ಯ ಕರ್ನಾಟಕ ವಿಧಾನಸಭೆ ಸದಸ್ಯರಾದ ಶ್ರೀ ಬಂಡೆಪ್ಪ ಖಾಶೆಂಪುರ್ (ಬೀದರ್ ದಕ್ಷಿಣ), ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3019ಕ್ಕೆ ಉತ್ತರಿಸುವ ಬಗ್ಗೆ.

* * * * *

ಮಾನ್ಯ ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ಬಂಡೆಪ್ಪ ಖಾಶೆಂಪುರ್ (ಬೀದರ್ ದಕ್ಷಿಣ), ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3019ಕ್ಕೆ ಕರ್ನಾಟಕ ವಿಧಾನಸಭೆ, ವಿಧಾನಸೌಧ, ಬೆಂಗಳೂರು. ಇಲ್ಲಿ ಉತ್ತರಿಸಬೇಕಾಗಿದ್ದು, ಸದರಿ ಪ್ರಶ್ನೆಯ ಉತ್ತರಗಳ 25 ಪ್ರತಿಗಳನ್ನು ಈ ಪತ್ರದೊಂದಿಗೆ ಅನುಬಂಧಿಸಿ ಕಳುಹಿಸಿಕೊಡಲು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ,

19.5.2020
**(ಸುಮತಿ ಎಸ್.)**
ಸರ್ಕಾರದ ಅಧೀನ ಕಾರ್ಯದರ್ಶಿ(ಸಪ್ರಕೈ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಪ್ರತಿಯನ್ನು ಮಾಹಿತಿಗಾಗಿ:**

1. ಮಾನ್ಯ ಮುಖ್ಯಮಂತ್ರಿಗಳ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು–01.
2. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿ, (ಎಂ.ಎಸ್.ಎಂ.ಇ. & ಗಣಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ವಿಕಾಸ ಸೌಧ, ಬೆಂಗಳೂರು–01.
3. ಸರ್ಕಾರದ ಅಧೀನ ಕಾರ್ಯದರ್ಶಿ (ಸಮನ್ವಯ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ವಿಕಾಸಸೌಧ, ಬೆಂಗಳೂರು–01.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3019
ಸದಸ್ಯರ ಹೆಸರು : ಶ್ರೀ ಬಂಡೆಪ್ಪ ಖಾಶೆಂಪುರ್ (ಬೀದರ್ ದಕ್ಷಿಣ),
ಉತ್ತರಿಸಬೇಕಾದ ದಿನಾಂಕ : 24.03.2020.
ಉತ್ತರಿಸುವವರು : ಮುಖ್ಯಮಂತ್ರಿಗಳು

| ಕ್ರಂ.ಸ. | ಪ್ರಶ್ನೆ | ಉತ್ತರ |
|---|---|---|
| ಅ) | ಬೀದರ್ ಜಿಲ್ಲೆಯಲ್ಲಿ ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಲು ಸರ್ಕಾರ ಕಳೆದ ಮೂರು ವರ್ಷಗಳಿಂದ ಎಷ್ಟು ಭೂಮಿಯನ್ನು ಮಂಜೂರು ಮಾಡಿದೆ; (ವಿವರವಾದ ಮಾಹಿತಿಯನ್ನು ಒದಗಿಸುವುದು) | ಬೀದರ ಜಿಲ್ಲೆಗೆ ಸಂಬಂಧಿಸಿದಂತೆ ಕಳೆದ 3 ವರ್ಷದಿಂದ ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಲು 47.49 ಎಕರೆ ಭೂಮಿಯನ್ನು ಮಂಜೂರು ಮಾಡಲಾಗಿದೆ. ಕೈಗಾರಿಕಾ ಪ್ರದೇಶವಾರು ಕೈಗಾರಿಕೆಗಳನ್ನು ಸ್ಥಾಪಿಸಲು ಭೂಮಿಯನ್ನು ಮಂಜೂರು ಮಾಡಿದ ಕೈಗಾರಿಕೆಗಳ ಸಂಖ್ಯೆ ಮತ್ತು ವಿಸ್ತೀರ್ಣದ ವಿವರ ಈ ಕೆಳಗಿನಂತಿರುತ್ತದೆ. |

| ಕ್ರಂ.ಸ. | ಕೈಗಾರಿಕಾ ಪ್ರದೇಶಗಳ ಹೆಸರು | ಕೈಗಾರಿಕೆಗಳನ್ನು ಸ್ಥಾಪಿಸಲು ಭೂಮಿಯನ್ನು ಮಂಜೂರು ಮಾಡಿದ ಕೈಗಾರಿಕೆಗಳ ಸಂಖ್ಯೆ | ಕೈಗಾರಿಕೆಗಳನ್ನು ಸ್ಥಾಪಿಸಲು ಮಂಜೂರು ಮಾಡಿದ ಭೂಮಿಯ ವಿಸ್ತೀರ್ಣ(ಎಕರೆ) |
|---|---|---|---|
| 1 | ಕೊಲ್ಹಾರ್ ಕೈಗಾರಿಕಾ ಪ್ರದೇಶ ಹಂತ-1 | 6 | 1.97 |
| 2 | ಕೊಲ್ಹಾರ್ ಕೈಗಾರಿಕಾ ಪ್ರದೇಶ ಹಂತ-2 | 67 | 32.64 |
| 3 | ಹುಮ್ನಾಬಾದ್ ಕೈಗಾರಿಕಾ ಪ್ರದೇಶ | 13 | 12.88 |
| | ಒಟ್ಟು | **86** | **47.49** |

| ಕ್ರಂ.ಸ. | ಪ್ರಶ್ನೆ | ಉತ್ತರ |
|---|---|---|
| ಆ) | ಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸಲು ಭೂ ಮಂಜೂರಾತಿಗಾಗಿ ಕಳೆದ ಮೂರು ವರ್ಷಗಳಲ್ಲಿ ಸ್ವೀಕೃತವಾಗಿರುವ ಅರ್ಜಿಗಳೆಷ್ಟು; | ಸ್ವೀಕರಿಸಿದ ಅರ್ಜಿಗಳ ವಿವರ ಈ ಕೆಳಗಿನಂತಿರುತ್ತದೆ.<br>1. ಕೆಐಎಡಿಬಿ ಕೈಗಾರಿಕಾ ಪ್ರದೇಶ – 188 ಅರ್ಜಿಗಳು<br>2. ಕೆಎಸ್‌ಎಸ್‌ಐಡಿಸಿ ಕೈಗಾರಿಕಾ ವಸಾಹತು – 186 ಅರ್ಜಿಗಳು |
| ಇ) | ಭೂ ಮಂಜೂರಾತಿಗಾಗಿ ಸ್ವೀಕೃತವಾಗಿರುವ ಅರ್ಜಿಗಳಲ್ಲಿ ಎಷ್ಟು ಅರ್ಜಿಗಳನ್ನು ಪುರಸ್ಕರಿಸಲಾಗಿದೆ ಹಾಗೂ ಅದಕ್ಕೆ ಮಾನದಂಡಗಳೇನು; | 1. ಕೆಐಎಡಿಬಿ ಕೈಗಾರಿಕಾ ಪ್ರದೇಶ – 86 ಅರ್ಜಿಗಳನ್ನು ಪುರಸ್ಕರಿಸಲಾಗಿದೆ.<br>2. ಕೆಎಸ್‌ಎಸ್‌ಐಡಿಸಿ ಕೈಗಾರಿಕಾ , ವಸಾಹತು – 56 ಅರ್ಜಿಗಳನ್ನು ಪುರಸ್ಕರಿಸಲಾಗಿದೆ.<br>ನಿಗಮ ಮತ್ತು ಮಂಡಳಿಯ ಹಂಚಿಕೆಯ ನಿಯಮಾವಳಿ ಪ್ರಕಾರ ಸ್ಕ್ರೀನಿಂಗ್ ಸಮಿತಿ ಮತ್ತು ಉಪ ಸಮಿತಿಗಳಲ್ಲಿ ಪರಿಶೀಲನೆ ಮಾಡಿ ನಂತರ ಜಿಲ್ಲಾಧಿಕಾರಿಗಳ ಅಧ್ಯಕ್ಷತೆಯಲ್ಲಿರುವ ಜಿಲ್ಲಾ ಮಟ್ಟದ ಏಕಗವಾಕ್ಷಿ ಸಮಿತಿ ಸಭೆಯಲ್ಲಿ ಅನುಮೋದನೆ ಪಡೆದು ನಂತರ ಹಂಚಿಕೆಗೆ ಕ್ರಮ ಜರುಗಿಸಲಾಗುವುದು. |
| ಈ) | ಭೂ ಮಂಜೂರು ಮಾಡುವಾಗ ಅರ್ಜಿದಾರರಿಗೆ ನಿರ್ದಿಷ್ಟವಾದ | ಭೂ ಮಂಜೂರು ಮಾಡುವಾಗ ಅರ್ಜಿದಾರರಿಗೆ ನಿರ್ದಿಷ್ಟವಾದ ಕೈಗಾರಿಕೆ ಮತ್ತು ಕಾಲಮಿತಿಯೊಳಗೆ ಕೈಗಾರಿಕೆಯನ್ನು ಸ್ಥಾಪಿಸುವ ಷರತ್ತಿಗೊಳಪಟ್ಟು ಮಂಜೂರಾತಿ |



| ಕ್ರಂ.ಸ. | ಪ್ರಶ್ನೆ | ಉತ್ತರ |
|---|---|---|
| | ಕೈಗಾರಿಕೆ ಮತ್ತು ಕಾಲಮಿತಿಯೊಳಗೆ ಕೈಗಾರಿಕೆಯನ್ನು ಸ್ಥಾಪಿಸುವ ಷರತ್ತಿಗೊಳಪಟ್ಟು ಮಂಜೂರಾತಿ ನೀಡಲಾಗುತ್ತಿದೆಯೇ; | ನೀಡಲಾಗುತ್ತಿದೆ. ಹಾಗೂ ಭೂಮಿಯನ್ನು ಹಂಚಿಕೆ ಮಾಡುವ ಸಮಯದಲ್ಲಿ ನೀಡುವ ಹಂಚಿಕೆಯ ಷರತ್ತು ಹಾಗೂ ನಿಬಂಧನೆಯ ಪಟ್ಟಿಯನ್ನು ಲಗತ್ತಿಸಿದೆ (ಅನುಬಂಧ-ಅ). |
| ಉ) | ಹಾಗಿದ್ದಲ್ಲಿ, ಭೂ ಮಂಜೂರಾತಿಯಾದ ನಂತರ ನಿರ್ದಿಷ್ಟವಾದ ಕೈಗಾರಿಕೆಯನ್ನು ಕಾಲಮಿತಿಯೊಳಗೆ ಸ್ಥಾಪಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಸದರಿ ಕೈಗಾರಿಕಾ ಪ್ರದೇಶದಲ್ಲಿ ಅಭಿವೃದ್ಧಿ ಪಡಿಸಲಾದ ನಿವೇಶನಗಳನ್ನು ದಿ. 20.11.2018 ರಿಂದ ಹಂಚಿಕೆ ಮಾಡಲಾಗಿರುತ್ತದೆ. ಭೂ ಮಂಜೂರಾತಿ ಪಡೆದು ಹಂಚಿಕೆ ಪಡೆದ ನಿವೇಶನಗಳಲ್ಲಿ ಘಟಕ ಪ್ರಾರಂಭಿಸುವ ಹಂತದಲ್ಲಿರುತ್ತದೆ ಹಾಗೂ ಸದರಿ ಮಂಜೂರಾತಿಯಾದ ನಿವೇಶನಗಳಿಗೆ ಉದ್ದೇಶಿತ ಯೋಜನೆಯನ್ನು ಅಭಿವೃದ್ಧಿ ಪಡಿಸಲು ಇನ್ನೂ ಕಾಲಮಿತಿಯೊಳಗಿರುತ್ತದೆ. |
| ಊ) | ಬಂದಿದ್ದಲ್ಲಿ, ಅಂತಹ ಕೈಗಾರಿಕೆಗಳ ವಿರುದ್ಧ ಸರ್ಕಾರವು ಯಾವ ಕ್ರಮ ಕೈಗೊಂಡಿದೆ? | ಸದರಿ ನಿವೇಶನಗಳಿಗೆ ಉದ್ದೇಶಿತ ಯೋಜನೆಯನ್ನು ಅಭಿವೃದ್ಧಿ ಪಡಿಸಲು ಇನ್ನೂ ಕಾಲಮಿತಿಇರುತ್ತದೆ. |

**ಸಿಐ 57 ಸಿಎಸ್‌ಸಿ 2020**

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿ

Annexe-A

**CONDITIONS OF ALLOTMENT**

The time schedule prescribed for various activities subsequent to payment of premium.

| | |
|---|---|
| 1. (a) For taking over possession of land. | 30 days from the date of payment of entire premium. |
| (b) For execution of Lease Agreement | 30 days from the date of receipt of Possession Certificate. |
| (c) For commencement of construction and completion of project by commencing production. | Construction should be commenced within nine months from the date of taking over possession and production should be commenced :-<br><br>i) within a period of three years after taking over possession in case of MSME and large industries<br>ii) within a period of five years after taking over possession in cases of mega, ultra mega and super mega projects.<br><br>Promoters to seek extension of time in writing by giving valid reasons to the concerned investment approving committees viz., DLSWCC / SLSWCC/ SHLCC/**Allotment Committee** prior to the above mentioned periods. |

2. On being satisfied that the land is not put to use for the purpose for which it was allotted, the Board will be free to re-enter upon and take possession of the whole or any part of the land which has not been put to proper use.

3. If necessary, the interest in this plot of land may be offered as security in order to obtain financial assistance from the Govt. or Corporate bodies like Life Insurance Corporation of India, Karnataka State Financial Corporation, Karnataka State Industrial Investment & Development Corporation, Trustees for Debenture Stock or Banks. However, prior permission of the Board shall be obtained for creating second and subsequent charges on the land.

C. Jayalakshmi
ಸಿ.ಜಯಲಕ್ಷ್ಮಿ
ಸಹಾಯಕ ಕಾರ್ಯದರ್ಶಿ




ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ, ಡಾ. ಬಿ. ಆರ್. ಅಂಬೇಡ್ಕರ್ ರಸ್ತೆ,
ಬೆಂಗಳೂರು –560001. ದೂ. 22034319

ಸಂಖ್ಯೆ: ಸಿಐ 56 ಸಿಎಸ್‌ಸಿ 2020 ದಿನಾಂಕ: 19.05.2020.

**ಇವರಿಂದ:**

ಸರ್ಕಾರದ ಪ್ರಧಾನ ಕಾರ್ಯದರ್ಶಿ,
(ಎಂ.ಎಸ್.ಎಂ.ಇ. & ಗಣಿ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ,
ವಿಕಾಸಸೌಧ, ಬೆಂಗಳೂರು–01.

**ಇವರಿಗೆ:**

ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನಸೌಧ, ಬೆಂಗಳೂರು–01.

**ಮಾನ್ಯರೆ,**

**ವಿಷಯ:** ಮಾನ್ಯ ಕರ್ನಾಟಕ ವಿಧಾನಸಭೆ ಸದಸ್ಯರಾದ ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3016ಕ್ಕೆ ಉತ್ತರಿಸುವ ಬಗ್ಗೆ.

* * * * *

ಮಾನ್ಯ ಕರ್ನಾಟಕ ವಿಧಾನ ಸಭೆ ಸದಸ್ಯರಾದ ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 3016ಕ್ಕೆ ಕರ್ನಾಟಕ ವಿಧಾನಸಭೆ, ವಿಧಾನಸೌಧ, ಬೆಂಗಳೂರು. ಇಲ್ಲಿ ಉತ್ತರಿಸಬೇಕಾಗಿದ್ದು, ಸದರಿ ಪ್ರಶ್ನೆಯ ಉತ್ತರಗಳ 25 ಪ್ರತಿಗಳನ್ನು ಈ ಪತ್ರದೊಂದಿಗೆ ಅನುಬಂಧಿಸಿ ಕಳುಹಿಸಿಕೊಡಲು ನಿರ್ದೇಶಿತಳಾಗಿದ್ದೇನೆ.

ತಮ್ಮ ನಂಬುಗೆಯ,

Sumathi 19.5.2020
**(ಸುಮತಿ ಎಸ್.)**
ಸರ್ಕಾರದ ಅಧೀನ ಕಾರ್ಯದರ್ಶಿ(ಸಪ್ರಕೈ),
ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ.

**ಪ್ರತಿಯನ್ನು ಮಾಹಿತಿಗಾಗಿ:**

1. ಮಾನ್ಯ ಮುಖ್ಯಮಂತ್ರಿಗಳ ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿ, ವಿಧಾನ ಸೌಧ, ಬೆಂಗಳೂರು–01.
2. ಸರ್ಕಾರದ ಪ್ರಧಾನ ಕಾರ್ಯದರ್ಶಿಗಳ ಆಪ್ತ ಕಾರ್ಯದರ್ಶಿ, (ಎಂ.ಎಸ್.ಎಂ.ಇ. & ಗಣಿ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ವಿಕಾಸ ಸೌಧ, ಬೆಂಗಳೂರು–01.
3. ಸರ್ಕಾರದ ಅಧೀನ ಕಾರ್ಯದರ್ಶಿ (ಸಮನ್ವಯ), ವಾಣಿಜ್ಯ ಮತ್ತು ಕೈಗಾರಿಕೆ ಇಲಾಖೆ, ವಿಕಾಸಸೌಧ, ಬೆಂಗಳೂರು–01.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3016
ಸದಸ್ಯರ ಹೆಸರು : ಶ್ರೀ ಉಮಾನಾಥ ಎ. ಕೋಟ್ಯಾನ್ (ಮೂಡಬಿದ್ರೆ)
ಉತ್ತರಿಸಬೇಕಾದ ದಿನಾಂಕ : 24.03.2020.
ಉತ್ತರಿಸುವವರು : ಮುಖ್ಯಮಂತ್ರಿಗಳು

| ಕ್ರಂ.ಸ. | ಪ್ರಶ್ನೆ | ಉತ್ತರ |
|---|---|---|
| ಅ) | ರಾಜ್ಯದಲ್ಲಿ 2018-19 ಹಾಗೂ 2019-20ನೇ ಸಾಲುಗಳಲ್ಲಿ ಸೂಕ್ಷ್ಮ, ಅತಿಸೂಕ್ಷ್ಮ ಮತ್ತು ಸಣ್ಣ ಕೈಗಾರಿಕಾ ವಲಯದಲ್ಲಿ ನೋಂದಣಿಗೊಂಡವುಗಳು ಮತ್ತು ಹೂಡಿಕೆಯಾದ ಬಂಡವಾಳ ಹಾಗೂ ಒದಗಿಸಿಕೊಡಲಾದ ಉದ್ಯೋಗಾವಕಾಶಗಳ ಕುರಿತು ವಿವರಗಳು ಯಾವುವು; | ರಾಜ್ಯದಲ್ಲಿ 2018-19 ಹಾಗೂ 2019-20 ನೇ ಸಾಲುಗಳಲ್ಲಿ ಸೂಕ್ಷ್ಮ, ಸಣ್ಣ ಕೈಗಾರಿಕಾ ವಲಯದಲ್ಲಿ ನೋಂದಣಿ ವಿವರಗಳು ಈ ಕೆಳಗಿನಂತಿವೆ. (ಕೆಳಗಿನ ಕೋಷ್ಟಕ ನೋಡಿ) |
| ಆ) | ಸಣ್ಣ ಕೈಗಾರಿಕೆಗಳನ್ನು ಪ್ರೋತ್ಸಾಹಿಸುವ ದಿಶೆಯಲ್ಲಿನ ಸರ್ಕಾರದ ಕ್ರಮಗಳು ಮತ್ತು ಎಲ್ಲಾ ಜಿಲ್ಲೆಗಳಲ್ಲಿಯೂ ಸೂಕ್ಷ್ಮ ಮತ್ತು ಸಣ್ಣ, ಅತಿಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸುವಲ್ಲಿ ಅರಿವು ಮೂಡಿಸುವ ತರಬೇತು ಮತ್ತು ಉಪಯುಕ್ತತೆಗಳನ್ನು ತಿಳಿಸುವ ಕುರಿತು ಹಮ್ಮಿಕೊಂಡ ಕಾರ್ಯಕ್ರಮಗಳೇನು; | ಸಣ್ಣ ಕೈಗಾರಿಕೆಗಳನ್ನು ಪ್ರೋತ್ಸಾಹಿಸುವ ದಿಶೆಯಲ್ಲಿ ರಾಜ್ಯ ಸರ್ಕಾರವು ಈ ಕೆಳಗಿನ ಯೋಜನೆಗಳನ್ನು ರಾಜ್ಯದ ಎಲ್ಲಾ ಜಿಲ್ಲೆಗಳಲ್ಲಿ ಅನುಷ್ಠಾನಗೊಳಿಸುತ್ತಿದೆ.<br><br>1. ಕೇಂದ್ರ ಸರ್ಕಾರದ ಪ್ರಧಾನಮಂತ್ರಿಗಳ ಉದ್ಯೋಗ ಸೃಜನ ಯೋಜನೆಯಡಿ ನಗರ ಮತ್ತು ಗ್ರಾಮೀಣ ಪ್ರದೇಶಗಳಲ್ಲಿ ಕೈಗಾರಿಕೆಗಳನ್ನು ಸ್ಥಾಪಿಸಲು ಗರಿಷ್ಠ ಸಾಲ ರೂ. 25 ಲಕ್ಷಗಳವರೆಗೆ ಬ್ಯಾಂಕ್‌ಗಳ ಮೂಲಕ ಸಾಲ ಸೌಲಭ್ಯ ಒದಗಿಸಿ ಸಣ್ಣ ಉದ್ಯಮಗಳನ್ನು ಸ್ಥಾಪಿಸಿ ಸ್ವಯಂ ಉದ್ಯೋಗ ಕೈಗೊಳ್ಳಲು ಅನುಕೂಲ ಒದಗಿಸಲಾಗುವುದು ಹಾಗೂ ಯೋಜನಾ ವೆಚ್ಚದ ಮೇಲೆ ಶೇ. 15 ರಿಂದ ಶೇ.35 ರವರೆಗೆ ಗರಿಷ್ಠ ರೂ.3.75 ಲಕ್ಷದಿಂದ ರೂ.8.75 ಲಕ್ಷದವರೆಗೆ ಸಹಾಯಧನ ನೀಡಲಾಗುತ್ತಿದೆ.<br><br>2. ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಮೂಲಕ ಮಹಿಳಾ ಉದ್ದಿಮೆದಾರರಿಗೆ ಶೇಕಡ 4% ರ ಬಡ್ಡಿ ದರದಲ್ಲಿ ರೂ.2.00 ಕೋಟಿಯವರೆಗೂ ಸಾಲ ಸೌಲಭ್ಯ ಒದಗಿಸಲಾಗುತ್ತಿದೆ.<br><br>3. ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಮೂಲಕ ಸೂಕ್ಷ್ಮ ಮತ್ತು ಸಣ್ಣ ಕೈಗಾರಿಕೆಗಳು ಸ್ಥಾಪಿಸಲು ರೂ.5.00 ಕೋಟಿಗಳವರೆಗೆ ಸಾಲ ಪಡೆದು ನಿಗದಿತ ಸಮಯದಲ್ಲಿ ಮರುಪಾವತಿ ಮಾಡಿದ ಅತಿ ಸಣ್ಣ ಮತ್ತು ಸಣ್ಣ ಕೈಗಾರಿಕಾ ಘಟಕಗಳಿಗೆ 5 ವರ್ಷಗಳ ಅವಧಿಗೆ ಶೇಕಡ 10ರಂತೆ ಬಡ್ಡಿ ಸಹಾಯಧನ ನೀಡಲಾಗುವುದು.<br><br>4. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡದ ಉದ್ಯಮಶೀಲರಿಗೆ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಶೇ 50% ರಿಯಾಯಿತಿ ದರದಲ್ಲಿ ಕೈಗಾರಿಕಾ ನಿವೇಶನಗಳನ್ನು (ಗರಿಷ್ಠ 2 ಎಕರೆ) ಮತ್ತು ಶೇ 90% ರಿಯಾಯಿತಿ ದರದಲ್ಲಿ ಕೈಗಾರಿಕಾ ಶೆಡ್‌ಗಳನ್ನು ನೀಡಲಾಗುತ್ತಿದೆ.<br><br>5. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡದ ಉದ್ಯಮಶೀಲರಿಗೆ ವಿಶೇಷ ಘಟಕ |

| ಸೂಕ್ಷ್ಮ ಕೈಗಾರಿಕೆಗಳು | | | |
|---|---|---|---|
| ಅವಧಿ | ಘಟಕಗಳ ಸಂಖ್ಯೆ | ಬಂಡವಾಳ ಹೂಡಿಕೆ ರೂ.ಲಕ್ಷಗಳಲ್ಲಿ | ಉದ್ಯೋಗಾವಕಾಶ |
| 2018-19 | 56,450 | 3,29,929=00 | 2,97,999 |
| 2019-20 | 65,378 | 3,84,155=00 | 3,23,272 |
| **ಸಣ್ಣ ಕೈಗಾರಿಕೆಗಳು** | | | |
| ಅವಧಿ | ಘಟಕಗಳ ಸಂಖ್ಯೆ | ಬಂಡವಾಳ ಹೂಡಿಕೆ ರೂ.ಲಕ್ಷಗಳಲ್ಲಿ | ಉದ್ಯೋಗಾವಕಾಶ |
| 2018-19 | 12,277 | 8,26,535=00 | 2,41,096 |
| 2019-20 | 13,440 | 8,39,648=00 | 2,22,569 |

| ಕ್ರಂ.ಸ. | ಪ್ರಶ್ನೆ | ಉತ್ತರ |
|---|---|---|
| | | ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಸ್ವಯಂ ಉದ್ಯೋಗ ಕೈಗೊಳ್ಳಲು ಬ್ಯಾಂಕಿನಿಂದ ಸಾಲ ಒದಗಿಸಿ ಯೋಜನಾ ವೆಚ್ಚದ ಮೇಲೆ ಶೇ 60 ರಷ್ಟು ಗರಿಷ್ಠ ರೂ.5.00 ಲಕ್ಷ ಸಹಾಯಧನ ನೀಡಲಾಗುತ್ತಿದೆ.<br><br>6. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡದ ಉದ್ಯಮಿದಾರರು ಬ್ಯಾಂಕ್/ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆದು ಗರಿಷ್ಠ ರೂ.2.00 ಕೋಟಿ ಯೋಜನಾ ವೆಚ್ಚದಲ್ಲಿ ಹೊಸ ಘಟಕಗಳನ್ನು ಸ್ಥಾಪಿಸುವ ಪ್ರಥಮ ಪೀಳಿಗೆಯ ಉದ್ಯಮಶೀಲರಿಗೆ ಯೋಜನಾ ವೆಚ್ಚದಲ್ಲಿ The Debt Equity Ratio 2:1 ಪ್ರಕಾರ (2/3 ರಷ್ಟು ಬ್ಯಾಂಕ್/ ಹಣಕಾಸು ಸಂಸ್ಥೆಗಳಿಂದ ಸಾಲ ಮತ್ತು 1/3 ಪ್ರವರ್ತಕರ ಬಂಡವಾಳ) ಘಟಕಕ್ಕೆ ಪ್ರವರ್ತಕ ಬಂಡವಾಳ ಹೂಡಿಕೆಯ 1/3 ರಲ್ಲಿ ಶೇ.50 ರಷ್ಟು ಬಡ್ಡಿ ರಹಿತ ಗರಿಷ್ಠ ರೂ.33 ಲಕ್ಷ ಸಾಫ್ಟ್ ಸೀಡ್ ಕ್ಯಾಪಿಟಲ್ ಆರ್ಥಿಕ ಸಹಾಯ ನೀಡಲಾಗುತ್ತಿದೆ.<br><br>7. ದಿ: 01.04.2017 ರಿಂದ ಮೊದಲ ಬಾರಿಗೆ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದವರು ಸ್ಥಾಪಿಸುವ ಸಣ್ಣ ಮತ್ತು ಅತೀ ಸಣ್ಣ ಘಟಕಗಳೂ ಸಾಲ ಪಡೆಯುವ ಸಂದರ್ಭದಲ್ಲಿ ಕೆಎಸ್.ಎಫ್.ಸಿ ಮತ್ತು ಇತರೇ ಹಣಕಾಸು ಸಂಸ್ಥೆಯವರು ವಿಧಿಸಿರುವ ಪರಿಷ್ಕರಣಾ ಶುಲ್ಕ, ಕಾನೂನು ಶುಲ್ಕ, ಏಕಕಾಲಿಕ ಸಾಲ ವಿತರಣಾ ಶುಲ್ಕ ಮತ್ತು ಇತರೆ ಶುಲ್ಕಗಳನ್ನು ಭರಿಸಲಾಗುತ್ತಿದೆ.<br><br>8. ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡದ ಉದ್ಯಮಗಳು ದಿ: 01.04.2017 ರಿಂದ ಪ್ರಾರಂಭವಾಗಿರುವ ಹೊಸ ಸಣ್ಣ ಮತ್ತು ಅತೀ ಸಣ್ಣ ಕೈಗಾರಿಕಾ ಘಟಕಗಳಿಗೆ ಮೊದಲ 5 ವರ್ಷಗಳ ಅವಧಿಗೆ ಪ್ರತಿ ಯುನಿಟ್‌ಗೆ 2 ರೂ.ಗಳಷ್ಟು ವಿದ್ಯುಚ್ಛಕ್ತಿ ಸಹಾಯಧನ ನೀಡಲಾಗುತ್ತಿದೆ.<br><br>9. ಕರ್ನಾಟಕ ರಾಜ್ಯ ಕೈಗಾರಿಕಾ ನೀತಿ 2014-19ರಂತೆ ಕೆಳಕಾಣಿಸಿದ ಪ್ರೋತ್ಸಾಹ ಮತ್ತು ರಿಯಾಯಿತಿ ಸೌಲಭ್ಯಗಳನ್ನು ಅರ್ಹ ಕೈಗಾರಿಕೆಗಳಿಗೆ ನೀಡಿ ಉತ್ತೇಜಿಸಲಾಗುತ್ತಿದೆ.<br><br>1. ಮುದ್ರಾಂಕ ಶುಲ್ಕ ವಿನಾಯಿತಿ ಮತ್ತು ನೋಂದಣಿ ಶುಲ್ಕ ರಿಯಾಯಿತಿ.<br>2. ಬಂಡವಾಳ ಹೂಡಿಕೆ ಸಹಾಯಧನ.<br>3. ಬಡ್ಡಿ ಸಹಾಯಧನ.<br>4. ಭೂ ಪರಿವರ್ತನಾ ಶುಲ್ಕ ಮರುಪಾವತಿ.<br>5. ಪ್ರವೇಶ ತೆರಿಗೆ ವಿನಾಯಿತಿ.<br>6 ರಫ್ತು ಆದಾರಿತ ಘಟಕಗಳಿಗೆ ರಿಯಾಯಿತಿ.<br>7. ಕೃಷಿ ಉತ್ಪನ್ನ ಮಾರುಕಟ್ಟೆ ತೆರಿಗೆಯಿಂದ ವಿನಾಯಿತಿ.<br>8. ತ್ಯಾಜ್ಯ ಸಂಸ್ಕರಣಾ ಯಂತ್ರ ಸ್ಥಾಪನೆಗೆ ಸಹಾಯಧನ.<br>9. ವಿದ್ಯುತ್ ತೆರಿಗೆ ವಿನಾಯಿತಿ.<br>10. ತಾಂತ್ರಿಕ ಉನ್ನತೀಕರಣ, ಗುಣಮಟ್ಟ ಪ್ರಮಾಣ ಪತ್ರ ಮತ್ತು ಪೇಟೆಂಟ್ ನೋಂದಣಿ ಸಹಾಯಧನ.<br>11. ಮಳೆ ನೀರು ಕೊಯ್ಲು / ಸಂರಕ್ಷಣೆ ಸಹಾಯಧನ.<br>12. ಶಕ್ತಿ ಸಂರಕ್ಷಣೆ ಸಹಾಯಧನ.<br><br>10. ಕರ್ನಾಟಕ ಕೃಷಿ ವಾಣಿಜ್ಯ ಮತ್ತು ಆಹಾರ ಸಂಸ್ಕರಣಾ ನೀತಿ-2015 ರಡಿಯಲ್ಲಿ ಕೆಳಕಾಣಿಸಿದ ಪ್ರೋತ್ಸಾಹ ಮತ್ತು ರಿಯಾಯಿತಿ ಸೌಲಭ್ಯಗಳನ್ನು ಅರ್ಹ ಕೈಗಾರಿಕೆಗಳಿಗೆ ನೀಡಿ ಉತ್ತೇಜಿಸಲಾಗುತ್ತಿದೆ. |

| ಕ್ರಂ.ಸ. | ಪ್ರಶ್ನೆ | ಉತ್ತರ |
|---|---|---|
| | | 1. ಮುದ್ರಾಂಕ ಶುಲ್ಕ ವಿನಾಯಿತಿ ಮತ್ತು ನೋಂದಣಿ ಶುಲ್ಕ ರಿಯಾಯಿತಿ.<br>2. ಬಂಡವಾಳ ಹೂಡಿಕೆ ಸಹಾಯಧನ<br>3. ಬಡ್ಡಿ ಸಹಾಯಧನ<br>4. ಭೂ ಪರಿವರ್ತನಾ ಶುಲ್ಕ ಮರುಪಾವತಿ.<br>5. ಕೃಷಿ ಉತ್ಪನ್ನ ಮಾರುಕಟ್ಟೆ ತೆರಿಗೆಯಿಂದ ವಿನಾಯಿತಿ.<br>6. ತ್ಯಾಜ್ಯ ಸಂಸ್ಕರಣಾ ಯಂತ್ರ ಸ್ಥಾಪನೆಗೆ ಸಹಾಯಧನ.<br>7. ವಿದ್ಯುತ್ ತೆರಿಗೆ ವಿನಾಯಿತಿ<br><br>ಎಲ್ಲಾ ಜಿಲ್ಲೆಗಳಲ್ಲಿಯೂ ಸೂಕ್ಷ್ಮ ಮತ್ತು ಸಣ್ಣ, ಅತಿಸಣ್ಣ ಕೈಗಾರಿಕೆಗಳನ್ನು ಸ್ಥಾಪಿಸುವಲ್ಲಿ ಅರಿವು ಮೂಡಿವು ತರಬೇತು ಮತ್ತು ಉಪಯುಕ್ತತೆಯನ್ನು ತಿಳಿಸುವ ಕುರಿತು ಹಮ್ಮಿಕೊಂಡ ಕಾರ್ಯಕ್ರಮಗಳ ವಿವರಗಳು ಈ ಕೆಳಗಿನಂತಿವೆ.<br><br>**1. ಉದ್ಯಮಶೀಲತಾ ಜಾಗೃತಿ ಕಾರ್ಯಕ್ರಮ:**<br><br>ಒಂದು ದಿನದ ಜಾಗೃತಿ ಕಾರ್ಯಕ್ರಮವನ್ನು ಕಾರ್ಯಕ್ರಮವನ್ನು ಐ.ಟಿ.ಐ ವಿದ್ಯಾರ್ಥಿಗಳಿಗೆ, ಅಂತಿಮ ವರ್ಷದ ಪದವಿ ವಿದ್ಯಾರ್ಥಿಗಳಿಗೆ, ಡಿಪ್ಲೋಮಾ ವಿದ್ಯಾರ್ಥಿಗಳಿಗೆ, ಇಂಜಿನಿಯರಿಂಗ್ ವಿದ್ಯಾರ್ಥಿಗಳಿಗೆ ಹಮ್ಮಿಕೊಳ್ಳಲಾಗುವುದು.<br>ಈ ಜಾಗೃತಿ ಕಾರ್ಯಕ್ರಮದಲ್ಲಿ ಈ ಕೆಳಗಿನ ವಿಷಯಗಳ ಬಗ್ಗೆ ಅರಿವು ಮೂಡಿಸಲಾಗುವುದು.<br>1. ನಿರುದ್ಯೋಗ ಮತ್ತು ಸ್ವಯಂ ಉದ್ಯೋಗದ ಅವಶ್ಯಕತೆ.<br>2. ಸ್ವಯಂ ಉದ್ಯೋಗಿಯಾಗಲು ಅಳವಡಿಸಿಕೊಳ್ಳಬೇಕಾದ ಗುಣಗಳು.<br>3. ಸ್ವಯಂ ಉದ್ಯೋಗಕ್ಕೆ ಸರ್ಕಾರದಿಂದ ಇರುವ ಕಾರ್ಯಕ್ರಮಗಳು.<br>4. ಸ್ವಯಂ ಉದ್ಯೋಗ ಮಾಡಲು ತರಬೇತಿಗೆ ಇರುವ ಸಂಸ್ಥೆಗಳು.<br>5. ಸ್ವಯಂ ಉದ್ಯೋಗದಲ್ಲಿರುವ ಅವಕಾಶಗಳು.<br><br>**2. ಉದ್ಯಮಶೀಲತಾ ತರಬೇತಿ ಕಾರ್ಯಕ್ರಮ:**<br>ಈ ತರಬೇತಿಯನ್ನು ಪ್ರಧಾನಮಂತ್ರಿ ಉದ್ಯೋಗ ಸೃಜನೆ ಯೋಜನೆಯಡಿಯಲ್ಲಿ ಸಾಲ ಮಂಜೂರಾತಿ ಪಡೆದ ಫಲಾನುಭವಿಗಳಿಗೆ ಅವರ ಚಟುವಟಿಕೆಯನ್ನು ಆಧರಿಸಿ 3 ರಿಂದ 10 ದಿನಗಳ ವರೆಗೆ ನೀಡಲಾಗುತ್ತದೆ. ಇದನ್ನು ಹೊರತು ಪಡಿಸಿ ಸ್ವಯಂ ಉದ್ಯೋಗ ಮಾಡ ಬಯಸುವ ಬೇರೆ ನಿರುದ್ಯೋಗಿ ಯುವಕ ಯುವತಿಯರಿಗೆ ರೂಡ್‌ಸೆಟ್, ಕ್ಯಾನ್‌ಸೆಟ್, ಮತ್ತಿತರ ಸ್ವಯಂ ಉದ್ಯೋಗ ತರಬೇತಿ ಸಂಸ್ಥೆಗಳ ಮೂಲಕ ಉದ್ಯಮಶೀಲತಾ ತರಬೇತಿಯನ್ನು ನೀಡಲಾಗುವುದು.<br><br>ಈ ತರಬೇತಿಯಲ್ಲಿ ಈ ಕೆಳಗಿನ ವಿಷಯಗಳ ಬಗ್ಗೆ ಮಾಹಿತಿ ನೀಡಲಾಗುವುದು.<br>1. ಯೋಜನಾವರದಿ ತಯಾರಿಕೆ<br>2. ಮಾರುಕಟ್ಟೆ ಸಮೀಕ್ಷೆ<br>3. ಬ್ರೇಕ್-ಈವನ್ (ಕನಿಷ್ಟ ಉತ್ಪಾದನಾ) ಮಾಹಿತಿ.<br>4. ಪ್ಯಾಕೇಜಿಂಗ್, ಜಾಹಿರಾತು ಬಗ್ಗೆ ಮಾಹಿತಿ.<br>5. ಕೈಗಾರಿಕೆ ಸ್ಥಾಪನೆಗೆ ವಿವಿಧ ಇಲಾಖೆಗಳಿಂದ ಪಡೆಯಬೇಕಾದ ಅನುಮತಿಗಳು.<br>6. ಕೈಗಾರಿಕೆ ಸ್ಥಾಪನೆಯಲ್ಲಿ ಪಾಲಿಸಬೇಕಾದ ನಿಯಮಗಳು.<br>7. ಬ್ಯಾಂಕ್‌ಗಳಿಂದ ಸಾಲ ಪಡೆಯಲು ಸಲ್ಲಿಸಬೇಕಾದ ದಾಖಲೆಗಳು.<br>8. ಯಶಸ್ವಿ ಉದ್ದಿಮೆದಾರರಿಂದ ಜ್ಞಾನಾರ್ಜನೆ.<br>9. ಕೈಗಾರಿಕೆಗಳ ಬಗ್ಗೆ ಪೂರಕವಾದ ಇತರೆ ಮಾಹಿತಿ. |

| ಕ್ರಂ.ಸ. | ಪ್ರಶ್ನೆ | ಉತ್ತರ |
|---|---|---|
| | | 3. ಇಲಾಖಾ ಕಾರ್ಯಕ್ರಮಗಳ ಬಗ್ಗೆ ಅರಿವು ಮೂಡಿಸುವ ಕಾರ್ಯಕ್ರಮ:<br>ಕೈಗಾರಿಕೆ ಮತ್ತು ವಾಣಿಜ್ಯ ಇಲಾಖೆ ಮತ್ತು ಜಿಲ್ಲಾ ಪಂಚಾಯತ್ ಕೈಗಾರಿಕಾ ವಿಭಾಗದಿಂದ ನಿರುದ್ಯೋಗಿ ಯುವಕ ಯುವತಿಯರು ಸ್ವಯಂ ಉದ್ಯೋಗ ಕೈಗೊಳ್ಳಲು ಇರುವ ಈ ಕೆಳಗಿನ ಕಾರ್ಯಕ್ರಮಗಳ ಬಗ್ಗೆ ಮಾಹಿತಿ ನೀಡಲಾಗುತ್ತದೆ.<br>1. ಉದ್ಯೋಗ ಆಧಾರ್ ಮೆಮೊರಾಂಡಮ್ ಮತ್ತು ಅದರ ನೊಂದಣಿ.<br>2. ಕೇಂದ್ರ ಸರ್ಕಾರದ ಪ್ರಧಾನಮಂತ್ರಿಗಳ ಉದ್ಯೋಗ ಸೃಜನ ಯೋಜನೆ.<br>3. ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಮೂಲಕ ಮಹಿಳಾ ಉದ್ದಿಮೆದಾರರಿಗೆ ಶೇಕಡ 4ರ ಬಡ್ಡಿ ದರದಲ್ಲಿ ರೂ.2.00 ಕೋಟಿಯವರೆಗೂ ಸಾಲ ಸೌಲಭ್ಯ.<br>4. ಕರ್ನಾಟಕ ರಾಜ್ಯ ಹಣಕಾಸು ಸಂಸ್ಥೆಯ ಮೂಲಕ ಸೂಕ್ಷ್ಮ ಮತ್ತು ಸಣ್ಣ ಕೈಗಾರಿಕೆಗಳು ಸ್ಥಾಪಿಸಲು ರೂ.5.00 ಕೋಟಿಗಳವರೆಗೆ ಸಾಲ ಪಡೆದು ನಿಗದಿತ ಸಮಯದಲ್ಲಿ ಮರುಪಾವತಿ ಮಾಡಿದ ಅತಿ ಸಣ್ಣ ಮತ್ತು ಸಣ್ಣ ಕೈಗಾರಿಕಾ ಘಟಕಗಳಿಗೆ 5 ವರ್ಷಗಳ ಅವಧಿಗೆ ಶೇಕಡ 10ರಂತೆ ಬಡ್ಡಿ ಸಹಾಯಧನ.<br>5. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡದ ಉದ್ಯಮಶೀಲರಿಗೆ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಶೇ 50 ರಿಯಾಯಿತಿ ದರದಲ್ಲಿ ಕೈಗಾರಿಕಾ ನಿವೇಶನಗಳನ್ನು (ಗರಿಷ್ಟ 2 ಎಕರೆ) ಮತ್ತು ಶೇ 90 ರಿಯಾಯಿತಿ ದರದಲ್ಲಿ ಕೈಗಾರಿಕಾ ಶೆಡ್‌ಗಳನ್ನು ನೀಡುವ ಕುರಿತು.<br>6. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡದ ಉದ್ಯಮಶೀಲರಿಗೆ ವಿಶೇಷ ಘಟಕ ಉಪಯೋಜನೆ ಮತ್ತು ಗಿರಿಜನ ಉಪಯೋಜನೆಯಡಿಯಲ್ಲಿ ಸ್ವಯಂ ಉದ್ಯೋಗ ಕೈಗೊಳ್ಳಲು ಬ್ಯಾಂಕಿನಿಂದ ಸಾಲ ಒದಗಿಸಿ ಯೋಜನಾ ವೆಚ್ಚದ ಮೇಲೆ ಶೇ 60 ರಷ್ಟು ಗರಿಷ್ಟ ರೂ.5.00 ಲಕ್ಷ ಸಹಾಯಧನ ನೀಡುವ ಕುರಿತು.<br>7. ಪರಿಶಿಷ್ಟ ಜಾತಿ/ ಪರಿಶಿಷ್ಟ ಪಂಗಡಗಳು ಸ್ಥಾಪಿಸುವ ಕೈಗಾರಿಕಾ ಸಂಘ / ಸಂಸ್ಥೆ / ಟ್ರಸ್ಟ್ ಅಥವಾ ಶೇಕಡ 51 ಕ್ಕಿಂತ ಹೆಚ್ಚು ಇರುವ ಪರಿಶಿಷ್ಟ ಜಾತಿ / ಪರಿಶಿಷ್ಟ ಪಂಗಡದ ಸದಸ್ಯರನ್ನು ಒಳಗೊಂಡ ಇತರೆ ಸಂಘ/ ಸಂಸ್ಥೆಗಳಿಗೆ ಕೌಶಲ್ಯಾಭಿವೃದ್ಧಿ ತರಬೇತಿ ಕೇಂದ್ರಗಳನ್ನು / ಸಾಮಾನ್ಯ ಸೌಲಭ್ಯ ಕೇಂದ್ರಗಳ ಸ್ಥಾಪನೆಗೆ ಸಂಬಂಧಪಟ್ಟಂತೆ ಕಟ್ಟಡ ನಿರ್ಮಾಣ ಮತ್ತು ಯಂತ್ರೋಪಕರಣ/ ಉಪಕರಣಗಳ ಖರೀದಿಗೆ ಗರಿಷ್ಟ ರೂ.20.00 ಲಕ್ಷ ಅನುದಾನವನ್ನು ನೀಡುವ ಕುರಿತು.<br>8. ಪರಿಶಿಷ್ಟ ಜಾತಿಯ ಮತ್ತು ಪರಿಶಿಷ್ಟ ಪಂಗಡದ ಉದ್ಯಮಿದಾರರು ಬ್ಯಾಂಕ್/ ಹಣಕಾಸು ಸಂಸ್ಥೆಗಳಿಂದ ಸಾಲ ಪಡೆದು ಗರಿಷ್ಟ ರೂ.2.00 ಕೋಟಿ ಯೋಜನಾ ವೆಚ್ಚದಲ್ಲಿ ಹೊಸ ಘಟಕಗಳನ್ನು ಸ್ಥಾಪಿಸುವ ಪ್ರಥಮ ಪೀಳಿಗೆಯ ಉದ್ಯಮಶೀಲರಿಗೆ ಯೋಜನಾ ವೆಚ್ಚದಲ್ಲಿ The Debt Equity Ratio 2:1 ಪ್ರಕಾರ (2/3 ರಷ್ಟು ಬ್ಯಾಂಕ್/ ಹಣಕಾಸು ಸಂಸ್ಥೆಗಳಿಂದ ಸಾಲ ಮತ್ತು 1/3 ಪ್ರವರ್ತಕರ ಬಂಡವಾಳ) ಘಟಕಕ್ಕೆ ಪ್ರವರ್ತಕ ಬಂಡವಾಳ ಹೂಡಿಕೆಯ 1/3 ರಲ್ಲಿ ಶೇ.50 ರಷ್ಟು ಬಡ್ಡಿ ರಹಿತ ಗರಿಷ್ಟ ರೂ.33 ಲಕ್ಷ ಸಾಫ್ಟ್ ಸೀಡ್ ಕ್ಯಾಪಿಟಲ್ ಆರ್ಥಿಕ ಸಹಾಯ ದೊರೆಯುವ ಕುರಿತು.<br>9. ಕನಾಟಕ ರಾಜ್ಯ ಕೈಗಾರಿಕಾ ನೀತಿಯಡಿಯಲ್ಲಿ ನೀಡಲಾಗುವ ಪ್ರೋತ್ಸಾಹ ಮತ್ತು ರಿಯಾಯಿತಿಗಳು.<br>ದಕ್ಷಿಣ ಕನ್ನಡ ಜಿಲ್ಲೆಯಲ್ಲಿ ತಾಂತ್ರಿಕ ವಿದ್ಯಾಲಯಗಳಲ್ಲಿ 2018-19 & 2019-20 ನೇ ಸಾಲಿನಲ್ಲಿ ನಡೆಸಲಾದ ಕಾರ್ಯಕ್ರಮಗಳ ವಿವರ. |

| ತಾಲ್ಲೂಕು | 2018-19 | 2019-20 |
|---|---|---|
| ಮಂಗಳೂರು | 6 | 5 |
| ಪುತ್ತೂರು | – | 1 |

<table>
<tr><th>ಕ್ರಂ.ಸ.</th><th>ಪ್ರಶ್ನೆ</th><th>ಉತ್ತರ</th></tr>
<tr><td></td><td></td><td>
<table>
<tr><td>ಸುಳ್ಯ</td><td>–</td><td>1</td></tr>
<tr><td>ಬಂಟ್ವಾಳ</td><td>–</td><td>1</td></tr>
<tr><td>ಬೆಳ್ತಂಗಡಿ</td><td>–</td><td>1</td></tr>
<tr><td>ಮೂಡಬಿದ್ರೆ</td><td>–</td><td>–</td></tr>
<tr><td>ಕಡಬ</td><td>–</td><td>–</td></tr>
<tr><td>ಒಟ್ಟು</td><td>6</td><td>9</td></tr>
</table>
</td></tr>
<tr><td>ಇ)</td><td>ಜಿಲ್ಲಾ ಮತ್ತು ತಾಲ್ಲೂಕು ಪ್ರದೇಶಗಳಲ್ಲಿ ಕುಲವೃತ್ತಿ/ಪಾರಂಪರಿಕ ಆಧಾರಿತ ಸೂಕ್ಷ್ಮ ಗುಡಿ ಕೈಗಾರಿಕೆಗಳಿಗೆ ಪ್ರೋತ್ಸಾಹ ಮತ್ತು ಆಧುನಿಕ ತಾಂತ್ರಿಕಜ್ಞಾನ ಬಳಕೆಯನ್ನು ಉಪಯೋಗಿಸುವ ಕುರಿತು ಅರಿವು ಜ್ಞಾನಲಬ್ಯ ಮಾಡುವ ಮೂಲಕ ನಶಿಸುತ್ತಿರುವ ಗುಡಿ ಕೈಗಾರಿಕೆಗಳನ್ನು ಮುನ್ನಡೆಸಲು ಇಲಾಖೆಯು ಕ್ರಮ ಜರುಗಿಸುವುದೇ?</td><td>ಜಿಲ್ಲಾ ಮತ್ತು ತಾಲ್ಲೂಕು ಪ್ರದೇಶಗಳಲ್ಲಿ ಕುಲವೃತ್ತಿ / ಪಾರಂಪರಿಕ ಆಧಾರಿತ ಸೂಕ್ಷ್ಮ ಗುಡಿ ಕೈಗಾರಿಕೆಗಳಿಗೆ ಪ್ರೋತ್ಸಾಹ ಮತ್ತು ಆಧುನಿಕ ತಾಂತ್ರಿಕಜ್ಞಾನ ಬಳಕೆಯನ್ನು ಉಪಯೋಗಿಸುವ ಕುರಿತು ಅರಿವು ಜ್ಞಾನಲಭ್ಯ ಮಾಡುವ ಮೂಲಕ ನಶಿಸುತ್ತಿರುವ ಗುಡಿ ಕೈಗಾರಿಕೆಗಳನ್ನು ಮುನ್ನಡೆಸಲು ಇಲಾಖೆಯು ಈ ಕೆಳಗಿನ ಕ್ರಮಗಳನ್ನು ಜರುಗಿಸುತ್ತಿದೆ.<br><br>1. ಜಿಲ್ಲಾ ಮತ್ತು ತಾಲ್ಲೂಕು ಪ್ರದೇಶಗಳಲ್ಲಿ ಕುಲವೃತ್ತಿ/ಪಾರಂಪರಿಕ ಆಧಾರಿತ ಸೂಕ್ಷ್ಮ ಗುಡಿ ಕೈಗಾರಿಕೆಗಳಿಗೆ ಅರಿವು ಮೂಡಿಸುವ ಕಾರ್ಯಕ್ರಮಗಳ ಮೂಲಕ ಇಲಾಖೆಯ ಯೋಜನೆಗಳು ಹಾಗೂ ಸರ್ಕಾರದಿಂದ ಸಿಗುವ ಸೌಲಭ್ಯಗಳ ಕುರಿತು ಮಾಹಿತಿ ನೀಡಲಾಗುತ್ತಿದೆ.<br><br>2. ಗುಡಿ ಕೈಗಾರಿಕೆಗಳನ್ನು ಮುಂದುವರಿಸಿಕೊಂಡು ಹೋಗಲು ಹಾಗೂ ಉತ್ತೇಜಿಸಲು ಗುಡಿ ಕಸುಬುಗಳಿಗೆ ಸುಧಾರಿತ ಉಪಕರಣಗಳನ್ನು ಸರಬರಾಜು ಮಾಡಲಾಗುತ್ತಿದೆ. ಕುಶಲಕರ್ಮಿಗಳಿಂದ ಪ್ರಾತ್ಯಕ್ಷಿಕೆ ಕಾರ್ಯಕ್ರಮ ಅನುಷ್ಠಾನಗೊಳಿಸಲಾಗುತ್ತಿದೆ.<br><br>3. ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮ ವತಿಯಿಂದ ಐ.ಡಿ.ಪಿ.ಹೆಚ್. (Integrated Development and Promotion of Handicrafts) ಕೇಂದ್ರ ಸರ್ಕಾರದ ಯೋಜನೆಯಡಿ ಈ ಕೆಳಕಂಡ ಕಾರ್ಯಕ್ರಮಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ:<br>A. Development Commissioner (Handicrafts) ನಡಿ ನೊಂದಾಯಿತ ಕರಕುಶಲಕರ್ಮಿಗಳಿಗೆ 02 ತಿಂಗಳ Design & Technical Development Workshop ನಡೆಸಿ ಕುಶಲಕರ್ಮಿಗಳು ಹೊಸ ವಿನ್ಯಾಸದ ಕರಕುಶಲ ವಸ್ತುಗಳನ್ನು ಉತ್ಪಾದಿಸಲು ಕೌಶಲ್ಯತರಬೇತಿ ನೀಡಲಾಗುತ್ತಿದೆ.<br>B. ಅಭಿವೃದ್ಧಿ ಆಯುಕ್ತರು (ಕರಕುಶಲ) ಇಲ್ಲಿ ನೊಂದಾಯಿತ ಕುಶಲಕರ್ಮಿಗಳಿಗೆ ಮಾರುಕಟ್ಟೆ ಸೌಲಭ್ಯ ಒದಗಿಸಲು ವಸ್ತು ಪ್ರದರ್ಶನಗಳನ್ನು ಹಮ್ಮಿಕೊಳ್ಳಲಾಗುತ್ತಿದೆ.<br>C. ಕರ್ನಾಟಕ ರಾಜ್ಯ ಕರಕುಶಲ ಅಭಿವೃದ್ಧಿ ನಿಗಮದ ಕುಶಲಕರ್ಮಿಗಳ ಬಗ್ಗೆ ಮಾಹಿತಿ / ದಾಖಲಾತಿಗಳನ್ನು ಡಿಜಿಟಲ್‌ಕರಣಗೊಳಿಸಲು ಸಾಫ್ಟ್‌ವೇರ್ ಅಭಿವೃದ್ಧಿ ಪಡಿಸಲಾಗುತ್ತಿದೆ.<br>D. ಅಭಿವೃದ್ಧಿ ಆಯುಕ್ತರು (ಕರಕುಶಲ) ನೊಂದಾಯಿತ ಕುಶಲಕರ್ಮಿಗಳಿಗೆ ಶಿರಸಿ ಕಲಾ ಸಂಕೀರ್ಣದ ಸಾಮಾನ್ಯ ಸೌಲಭ್ಯ ಕೇಂದ್ರಕ್ಕೆ ಯಂತ್ರೋಪಕರಣಗಳನ್ನು ಖರೀದಿಸಲಾಗುತ್ತಿದೆ.<br>E. ಅಭಿವೃದ್ಧಿ ಆಯುಕ್ತರು (ಕರಕುಶಲ) ನೊಂದಾಯಿತ ಶ್ರೀಗಂಧದ / ಮರದ / ಬಿದರಿ ಕುಶಲಕರ್ಮಿಗಳಿಗೆ ಉಪಕರಣಗಳನ್ನು ಸುಧಾರಿತ ಉಪಕರಣಗಳನ್ನು ನೀಡಲಾಗುತ್ತಿದೆ.<br>F. ಶಿವಮೊಗ್ಗ ಜಿಲ್ಲೆಯ ಸಾಗರದಲ್ಲಿ ಪಾರಂಪರಿಕ ಕಲೆಯನ್ನು ಉಳಿಸಲು ಮರದ ಕೆತ್ತನೆ ಮತ್ತು ಕಲ್ಲಿನ ಕೆತ್ತನೆಯ "ಶಿಲ್ಪಗುರುಕುಲ" ತರಬೇತಿ ಕೇಂದ್ರವನ್ನು ಸ್ಥಾಪಿಸಲಾಗಿದ್ದು ಇಲ್ಲಿ ಉಚಿತವಾಗಿ 2 ವರ್ಷಗಳ ತರಬೇತಿಯನ್ನು ಊಟ ಮತ್ತು ವಸತಿ ಸೌಲಭ್ಯದೊಂದಿಗೆ ನೀಡಲಾಗುತ್ತಿದೆ.</td></tr>
</table>

| ಕ್ರಂ.ಸ. | ಪ್ರಶ್ನೆ | ಉತ್ತರ |
|---|---|---|
| | | G. "ಮಾರುಕಟ್ಟೆ ಅಭಿವೃದ್ಧಿ ಸಹಾಯಧನ": ರಾಜ್ಯದಲ್ಲಿ ಕಾರ್ಯ ನಿರ್ವಹಿಸುತ್ತಿರುವ ಖಾದಿ ಸಂಘ /ಸಂಸ್ಥೆಗಳು ಖಾದಿ ಉತ್ಪಾದನೆ ಮತ್ತು ಮಾರಾಟದಲ್ಲಿ ತೊಡಗಿವೆ. ಒಟ್ಟು ಉತ್ಪಾಧನೆ ಮೇಲೆ ಭಾರತ ಸರ್ಕಾರದಿಂದ 20% ಹಾಗೂ ರಾಜ್ಯ ಸರ್ಕಾರದಿಂದ 15% ಸಹಾಯಧನ ಬಿಡುಗಡೆ ಮಾಡಲಾಗುತ್ತದೆ. ಸದರಿ ಮೊತ್ತದ ಪೈಕಿ ಶೇಕಡ 25 ರಷ್ಟು ನೇಕಾರರಿಗೆ ಶೇಕಡ 30 ರಷ್ಟು ಸಂಸ್ಥೆಯ ಮೂಲಭೂತ ಸೌಕರ್ಯಕ್ಕಾಗಿ ಹಾಗೂ ಶೇ.45 ರಷ್ಟು ಮಾರಾಟ ಪ್ರಚಾರಕ್ಕಾಗಿ ಅನುದಾನ ಬಳಕೆ ಮಾಡಲಾಗುತ್ತದೆ.<br><br>H. ಕರ್ನಾಟಕ ಕೈಗಾರಿಕಾ ನೀತಿ 2014-19 ರಲ್ಲಿ ಕುಶಲಕರ್ಮಿಗಳು ತಾವು ಉತ್ಪಾದಿಸಿದ ವಸ್ತುಗಳಿಗೆ ಮಾರುಕಟ್ಟೆ ಒದಗಿಸಲು ಆರ್ಥಿಕ ಸಹಾಯ ಒದಗಿಸಲಾಗುತ್ತಿದ್ದು ವಿವರಗಳು ಈ ಕೆಳಗಿನಂತಿವೆ.<br><br>• ದಕ್ಷಿಣ ಅಮೇರಿಕಾ ರಾಷ್ಟ್ರಗಳಿಗೆ ಪ್ರವಾಸ:ರೂ.1.75 ಲಕ್ಷದ ವರೆಗೆ ಆರ್ಥಿಕ ಸಹಾಯ<br>1. ಶೇ 75% ರಷ್ಟು ವಿಮಾನ ಪ್ರಯಾಣ ದರ (ಎಕಾನಮಿ) ಗರಿಷ್ಟ ರೂ.1.00 ಲಕ್ಷ<br>2. ಶೇ 50% ರಷ್ಟು ಸ್ಟಾಲ್‌ಗಳ ಬಾಡಿಗೆ ಗರಿಷ್ಟ ರೂ.50,000 (ಮಹಿಳೆ, ಪ.ಜಾತಿ, ಪ.ಪಂಗಡ ಉದ್ಯಮಶೀಲರಿಗೆ ಶೇ. 100% ಬಾಡಿಗೆಯನ್ನು ಮರುಪಾವತಿಸಲಾಗುವುದು. ಗರಿಷ್ಟ ರೂ.50,000), ಶೇ 50% ಸಾಗಾಣಿಕಾ ವೆಚ್ಚ ಗರಿಷ್ಟ ರೂ.10,000/-<br>3. ದಿನಭತ್ಯೆ ಪ್ರತಿ ದಿನಕ್ಕೆ $ 100 ಕಾರ್ಯನಿರ್ವಹಿಸುವ 3 ದಿನಗಳಿಗೆ.<br><br>• ಇತರೆ ರಾಷ್ಟ್ರಗಳಿಗೆ: ರೂ.1.50 ಲಕ್ಷದ ವರೆಗೆ ಆರ್ಥಿಕ ಸಹಾಯ<br>1. ಶೇ 75% ರಷ್ಟು ವಿಮಾನ ಪ್ರಯಾಣ ದರ (ಎಕಾನಮಿ) ಗರಿಷ್ಟ ರೂ.75,000<br>2. ಶೇ 50% ರಷ್ಟು ಸ್ಟಾಲ್‌ಗಳ ಬಾಡಿಗೆ ಗರಿಷ್ಟ ರೂ.50,000 (ಮಹಿಳೆ, ಪ.ಜಾತಿ, ಪ.ಪಂಗಡ ಉದ್ಯಮಶೀಲರಿಗೆ ಶೇ100% ಬಾಡಿಗೆಯನ್ನು ಮರುಪಾವತಿಸಲಾಗುವುದು. ಗರಿಷ್ಟ ರೂ.50,000), ಶೇ 50% ಸಾಗಾಣಿಕಾ ವೆಚ್ಚ ಗರಿಷ್ಟ ರೂ.10,000/-<br>3. ದಿನಭತ್ಯೆ ಪ್ರತಿ ದಿನಕ್ಕೆ $ 100 ಕಾರ್ಯನಿರ್ವಹಿಸುವ 3 ದಿನಗಳಿಗೆ. |

**ಸಿಐ 56 ಸಿಎಸ್‌ಸಿ 2020**

ಬಿ.ಎಸ್. ಯಡಿಯೂರಪ್ಪ

*(ಬಿ.ಎಸ್.ಯಡಿಯೂರಪ್ಪ)*

ಮುಖ್ಯಮಂತ್ರಿ

56

ಕರ್ನಾಟಕ ಸರ್ಕಾರ

ಸಂಖ್ಯೆ: ಪಿಡಿಎಸ್ 28 ಕೆಎಲ್ಎಸ್ 2020

ಕರ್ನಾಟಕ ಸರ್ಕಾರದ ಸಚಿವಾಲಯ
ಬಹುಮಹಡಿ ಕಟ್ಟಡ,
ಬೆಂಗಳೂರು, ದಿನಾಂಕ:23.03.2020.

24/3

ಇವರಿಂದ:

**ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,**
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ,
ಬೆಂಗಳೂರು

ಇವರಿಗೆ:

**ಕಾರ್ಯದರ್ಶಿ(ಪ್ರ),**
ಕರ್ನಾಟಕ ವಿಧಾನ ಸಭೆ ಸಚಿವಾಲಯ,
ಪ್ರಶ್ನೆಗಳ ಶಾಖೆ, ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

ವಿಷಯ: ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕುಮಾರಸ್ವಾಮಿ ಹೆಚ್.ಕೆ. (ಸಕಲೇಶಪುರ)-ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2858ಕ್ಕೆ ಉತ್ತರಿಸುವ ಬಗ್ಗೆ.

ಉಲ್ಲೇಖ: ಕಾರ್ಯದರ್ಶಿ(ಪ್ರ), ಕರ್ನಾಟಕ ವಿಧಾನ ಸಭೆ ಸಚಿವಾಲಯರವರ ಪತ್ರ ದಿನಾಂಕ:12.03.2020.

* * * *

ಮೇಲ್ಕಂಡ ವಿಷಯ ಹಾಗೂ ಉಲ್ಲೇಖಕ್ಕೆ ಸಂಬಂಧಿಸಿದಂತೆ ಮಾನ್ಯ ವಿಧಾನ ಸಭಾ ಸದಸ್ಯರಾದ ಶ್ರೀ ಕುಮಾರಸ್ವಾಮಿ ಹೆಚ್.ಕೆ. (ಸಕಲೇಶಪುರ)-ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2858ಕ್ಕೆ ಉತ್ತರವನ್ನು ಸಿದ್ಧಪಡಿಸಿ ಈ ಪತ್ರಕ್ಕೆ ಲಗತ್ತಿಸಿ ಮುಂದಿನ ಕ್ರಮಕ್ಕಾಗಿ ಕಳುಹಿಸಲಾಗಿದೆ.

ತಮ್ಮ ವಿಶ್ವಾಸಿ,

23.03.2020.
(ಚಿಕ್ಕಸುಬ್ಬಯ್ಯ)
ನಿರ್ದೇಶಕರು,
ಎಡಿಬಿ ವಿಭಾಗ,
ಯೋಜನೆ, ಕಾರ್ಯಕ್ರಮ ಸಂಯೋಜನೆ
ಮತ್ತು ಸಾಂಖ್ಯಿಕ ಇಲಾಖೆ.

**ಪ್ರತಿ ಮಾಹಿತಿಗಾಗಿ:**

1) ಮಾನ್ಯ ಮುಖ್ಯಮಂತ್ರಿಯವರ ಆಪ್ತ ಕಾರ್ಯದರ್ಶಿಗಳು, ವಿಧಾನ ಸೌಧ, ಬೆಂಗಳೂರು.
2) ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿಯವರ ಆಪ್ತ ಕಾರ್ಯದರ್ಶಿ, ಯೋಜನೆ, ಕಾರ್ಯಕ್ರಮ ಸಂಯೋಜನೆ ಮತ್ತು ಸಾಂಖ್ಯಿಕ ಇಲಾಖೆ.

## ಕರ್ನಾಟಕ ವಿಧಾನಸಭೆ

1) ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 2858

2) ಸದಸ್ಯರ ಹೆಸರು : ಶ್ರೀ ಕುಮಾರಸ್ವಾಮಿ ಹೆಚ್.ಕೆ (ಸಕಲೇಪುರ )

3) ಉತ್ತರಿಸುವ ದಿನಾಂಕ : 24.03.2020

4) ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಯವರು

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| (ಅ) | ಕಳೆದ 3 ವರ್ಷಗಳಲ್ಲಿ ಹಾಸನ ಜಿಲ್ಲೆಯ ಶಾಸಕರುಗಳಿಗೆ ನಿಗದಿಯಾದ ಅನುದಾನದ ಮೊತ್ತವೆಷ್ಟು; | ಕಳೆದ 3 ವರ್ಷಗಳಲ್ಲಿ 2017-18, 2018-19 ಮತ್ತು 2019-20ನೇ ಸಾಲಿನಲ್ಲಿ ಹಾಸನ ಜಿಲ್ಲೆಯ 8 ಶಾಸಕರುಗಳಿಗೆ ತಲಾ ರೂ.2.00 ಕೋಟಿಗಳಂತೆ ರೂ.48.00 ಕೋಟಿಗಳ ಅನುದಾನವನ್ನು ನಿಗದಿಪಡಿಸಲಾಗಿದೆ. |
| (ಆ) | ವರ್ಷವಾರು ಇಲ್ಲಿಯವರೆಗೂ ಬಿಡುಗಡೆಯಾದ ಅನುದಾನದ ಮೊತ್ತವೆಷ್ಟು;(ಕ್ಷೇತ್ರವಾರು ಮಾಹಿತಿ ನೀಡುವುದು) | ವರ್ಷವಾರು ಇಲ್ಲಿಯವರೆಗೂ ಹಾಸನ ಜಿಲ್ಲೆಯ 8 ಶಾಸಕರುಗಳಿಗೆ ಶಾಸಕರ ಪ್ರದೇಶಾಭಿವೃದ್ಧಿ ಯೋಜನೆಯಡಿ ಈ ಕೆಳಗಿನಂತೆ ಅನುದಾನ ಬಿಡುಗಡೆ ಮಾಡಲಾಗಿದೆ:<br>• 2017-18 - ರೂ.15.50 ಕೋಟಿಗಳು<br>• 2018-19 - ರೂ.13.35 ಕೋಟಿಗಳು<br>• 2019-20 - ರೂ.14.92 ಕೋಟಿಗಳು<br>ಕ್ಷೇತ್ರವಾರು ಮಾಹಿತಿಯನ್ನು ಅನುಬಂಧ-1 ರಲ್ಲಿ ನೀಡಲಾಗಿದೆ. |
| (ಇ) | ಅನುದಾನ ಬಿಡುಗಡೆಯ ಅಧಿಕಾರವನ್ನು ಉಪ ವಿಭಾಗಾಧಿಕಾರಿಗಳಿಗೆ ನೀಡಲಾಗಿದ್ದು, ಪಿ.ಡಿ.ಖಾತೆ ತೆರೆಯಲು ಹಣ ಬಿಡುಗಡೆ ವಿಳಂಬವಾಗುತ್ತಿರುವುದು ನಿಜವೇ? | ಕಾಮಗಾರಿಗಳು ತ್ವರಿತವಾಗಿ ಅನುಷ್ಠಾನವಾಗುವ ಉದ್ದೇಶದಿಂದ ಯೋಜನೆಯ ಅನುಷ್ಠಾನದ ಅಧಿಕಾರವನ್ನು ಉಪ ವಿಭಾಗಾಧಿಕಾರಿಗಳಿಗೆ ವರ್ಗಾಯಿಸಲಾಗಿದ್ದು ಉಪ ವಿಭಾಗಾಧಿಕಾರಿಗಳು ಪಿ.ಡಿ.ಖಾತೆ ತೆರೆದು, ಸದರಿ ಯೋಜನೆಗೆ ಸಂಬಂಧಿಸಿದಂತೆ ಜಿಲ್ಲಾಧಿಕಾರಿಗಳ ಪಿ.ಡಿ.ಖಾತೆಯಲ್ಲಿ ಲಭ್ಯವಿರುವ ಅನುದಾನವನ್ನು ಆಯಾ ಜಿಲ್ಲೆಯ ಸಂಬಂಧಪಟ್ಟ ಉಪ ವಿಭಾಗಾಧಿಕಾರಿಗಳ ಪಿ.ಡಿ.ಖಾತೆಗೆ ವರ್ಗಾಯಿಸಿ ತುರ್ತು ಕ್ರಮವಹಿಸಲು ನಿರ್ದೇಶನವನ್ನು ಈಗಾಗಲೇ ಜಿಲ್ಲಾಧಿಕಾರಿಗಳಿಗೆ ನೀಡಲಾಗಿರುತ್ತದೆ. ಯೋಜನೆಗಳ ಅನುಷ್ಠಾನಕ್ಕೆ ತೊಂದರೆ ಆಗದಂತೆ ಕ್ರಮವಹಿಸಲಾಗುತ್ತಿದೆ. |

ಸಂಖ್ಯೆ: ಪಿಡಿಎಸ್ 28 ಕೆಎಲ್‌ಎಸ್ 2020

ಬಿ.ಎಸ್. ಯಡಿಯೂರಪ್ಪ

(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿ

ಅನುಬಂಧ

ಕಳೆದ ಮೂರು ವರ್ಷಗಳಾದ 2017-18, 2018-19 ಮತ್ತು 2019-20ನೇ ಸಾಲಿನಲ್ಲಿ ಕರ್ನಾಟಕ ಶಾಸಕರ ಸ್ಥಳೀಯ ಪ್ರದೇಶಾಭಿವೃದ್ಧಿ ಯೋಜನೆಯಡಿಯಲ್ಲಿ ಹಾಸನ ಜಿಲ್ಲೆಗೆ ಬಿಡುಗಡೆಯಾದ ಅನುದಾನದ ವಿವರ

(ರೂ.ಕೋಟಿಗಳಲ್ಲಿ)

| ಕ್ರ.ಸಂ | ವಿಧಾನಸಭಾ ಕ್ಷೇತ್ರಗಳು/ವಿಧಾನಪರಿಷತ್ ಸದಸ್ಯರುಗಳ ವಿವರ | ಸರ್ಕಾರದಿಂದ ಬಿಡುಗಡೆಯಾದ ಅನುದಾನ | | |
|---|---|---|---|---|
| | | 2017-18 | 2018-19 | 2019-20 |
| 1 | 2 | 3 | 4 | 5 |
| | ಹಾಸನ ಜಿಲ್ಲೆ | | | |
| 1 | ಬೇಲೂರು | 1.50 | 2.11 | 0.62 |
| 2 | ಅರಸೀಕೆರೆ | 2.00 | 1.61 | 0.62 |
| 3 | ಶ್ರವಣಬೆಳಗೊಳ | 2.00 | 1.61 | 0.62 |
| 4 | ಹೊಳೆನರಸಿಪುರ | 2.00 | 1.61 | 0.62 |
| 5 | ಅರಕಲಗೂಡು | 2.00 | 1.61 | 0.62 |
| 6 | ಹಾಸನ | 2.00 | 1.61 | 0.62 |
| 7 | ಸಕಲೇಶಪುರ | 2.00 | 1.61 | 0.62 |
| 1 | ಎಂ.ಎ.ಗೋಪಾಲಸ್ವಾಮಿ | 2.00 | 1.61 | 0.62 |
| 2 | ಮೊತ್ತ *** | 0.00 | 0.00 | 10.00 |
| | ಒಟ್ಟು | **15.50** | **13.35** | **14.92** |

ಟಿಪ್ಪಣಿ-ಫೆಬ್ರವರಿ-2019ರ ಅಂತ್ಯಕ್ಕೆ ರೂ.830.67 ಕೋಟಿಗಳಷ್ಟು ಹಣ ಜಿಲ್ಲಾಧಿಕಾರಿಗಳ ಪಿ.ಡಿ.ಖಾತೆಯಲ್ಲಿ ಉಳಿದಿದ್ದರಿಂದ ಶೇ75 ರಷ್ಟು ಖರ್ಚು ಭರಿಸದ ಕಾರಣ 2018-19ನೇ ಸಾಲಿನ ನಾಲ್ಕನೆಯ ಕಂತಿನ ಅನುದಾನವನ್ನು ಬಂಡವಾಳ ವೆಚ್ಚದಡಿಯಲ್ಲಿ ಎಲ್ಲಾ ಜಿಲ್ಲೆಗಳಿಗೆ ಬಿಡುಗಡೆಗೊಳಿಸಿರುವುದಿಲ್ಲ.

*** ಟಿಪ್ಪಣಿ-ಸರ್ಕಾರದ ಆದೇಶ ಸಂಖ್ಯೆ:ಯೋಇ 200 ಯೋವಿವಿ 2017, ದಿನಾಂಕ:12.12.2017ರನ್ವಯ ಶಿಕ್ಷಣ, ಆರೋಗ್ಯ ಹಾಗೂ ಮಹಿಳಾ ಮತ್ತು ಮಕ್ಕಳ ಅಭಿವೃದ್ಧಿ-ಈ ಮೂರು ಇಲಾಖೆಗಳಲ್ಲಿ ಕೈಗೊಂಡಿರುವ ಕಾಮಗಾರಿಗಳ ಪಾವತಿಗಾಗಿ ಹಾಗೂ ಜಿಲ್ಲೆಗಳಲ್ಲಿ ಹೆಚ್ಚಿನ ಪ್ರಗತಿ ಸಾಧಿಸಿರುವ ಮತ್ತು ಅನುದಾನಕ್ಕೆ ಬೇಡಿಕೆ ಸಲ್ಲಿಸಿರುವ ಜಿಲ್ಲೆಗಳಿಗೆ ದಿ:17.02.2020ರಂದು ಬಿಡುಗಡೆಗೊಳಿಸಿದೆ.

22.02.2020





ಸಂ:ಹೆಚ್‌ಡಿ 103 ಎಸ್‌ಎಸ್‌ಟಿ 2020

ಕರ್ನಾಟಕ ಸರ್ಕಾರದ ಸಚಿವಾಲಯ
ವಿಧಾನ ಸೌಧ
ಬೆಂಗಳೂರು, ದಿನಾಂಕ:23.03.2020

11

24/3

**ಇವರಿಂದ:-**
ಸರ್ಕಾರದ ಹೆಚ್ಚುವರಿ ಮುಖ್ಯ ಕಾರ್ಯದರ್ಶಿಗಳು,
ಒಳಾಡಳಿತ ಇಲಾಖೆ.

**ಇವರಿಗೆ:-**
ಕಾರ್ಯದರ್ಶಿ,
ಕರ್ನಾಟಕ ವಿಧಾನ ಸಭೆ
ವಿಧಾನ ಸೌಧ,
ಬೆಂಗಳೂರು.

ಮಾನ್ಯರೇ,

**ವಿಷಯ:-** ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಅರಗ ಜ್ಞಾನೇಂದ್ರ (ತೀರ್ಥಹಳ್ಳಿ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2795ಕ್ಕೆ ಉತ್ತರ ಒದಗಿಸುವ ಬಗ್ಗೆ.

-- -- --

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನ ಸಭೆ ಸದಸ್ಯರಾದ ಶ್ರೀ ಅರಗ ಜ್ಞಾನೇಂದ್ರ (ತೀರ್ಥಹಳ್ಳಿ) ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:2795ಕ್ಕೆ ಉತ್ತರದ 200 ಪ್ರತಿಗಳನ್ನು ಈ ಪತ್ರದೊಂದಿಗೆ ಲಗತ್ತಿಸಿ ಕಳುಹಿಸಲು ನಿರ್ದೇಶಿತಳಾಗಿದ್ದೇನೆ.

ತಮ್ಮ ವಿಶ್ವಾಸಿ

(ಕೆ.ಪದ್ಮನಿದೇವಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಒಳಾಡಳಿತ ಇಲಾಖೆ, (ಕಾನೂನು ಮತ್ತು ಸುವ್ಯವಸ್ಥೆ)
☎2203 3254, e-mail:uslo-home@karnataka.gov.in

# ಕರ್ನಾಟಕ ವಿಧಾನಸಭೆ

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2795 |
| ಸದಸ್ಯರ ಹೆಸರು | : | ಶ್ರೀ ಅರಗ ಜ್ಞಾನೇಂದ್ರ |
| ಉತ್ತರಿಸಬೇಕಾದ ದಿನಾಂಕ | : | 24.03.2020 |
| ಉತ್ತರಿಸುವ ಸಚಿವರು | : | ಗೃಹಸಚಿವರು. |

| ಕ್ರ.ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ದಿ ಇಂಜಿನಿಯರ್ಸ್ ಹೌಸಿಂಗ್ ಸೊಸೈಟಿ, ಯಶವಂತಪುರ, ಇದರ ಸಹಕಾರಿ ಸಂಸ್ಥೆಯ ಸದಸ್ಯರುಗಳಿಗೆ ನಿವೇಶನ ಹಂಚಿಕೆಯನ್ನು ಸದರಿ ಸೊಸೈಟಿಯು ನಿಯಮಾನುಸಾರ ಮಾಡುತ್ತಿದ್ದರೂ ಸಹ ಸದರಿ ಸಹಕಾರಿ ಸಂಸ್ಥೆಯ ಮೇಲೆ ಸಂಜಯನಗರ ಪೊಲೀಸ್ ಠಾಣೆ ಮೂಲಕ ಮಾತುಕತೆಗಾಗಿ ಕರೆದು ಸದಸ್ಯತ್ವ ಪಡೆಯದ ಲೈಸೆನ್ಸರ್‌ಗಳಿಂದ ಅರ್ಜಿ ಕೊಡಿಸಿ ಹಿರಿಯ ಅಧಿಕಾರಿಗಳ ಪ್ರಭಾವ ಬಳಸಿ ಆ ಮೂಲಕ ಸಂಧಾನ/ವ್ಯವಹಾರ ಬಗೆಹರಿಸುವಂತೆ ಮೌಖಿಕವಾಗಿ ನಿರ್ದೇಶನ ನೀಡುತ್ತಿದ್ದ ವಿಚಾರ ಸರ್ಕಾರದ ಗಮನಕ್ಕೆ ಬಂದಿದೆಯೇ; | ದಿ ಇಂಜಿನಿಯರ್ಸ್ ಹೌಸಿಂಗ್ ಸೊಸೈಟಿ ಸಹಕಾರಿ ಸಂಸ್ಥೆಯು ಶೇಷಾದ್ರಿಪುರಂ ಪೊಲೀಸ್ ಠಾಣಾ ಸರಹದ್ದಿನಲ್ಲಿ ಎನ್‌ಟಿಐ ಹೌಸಿಂಗ್ ಸೊಸೈಟಿ ಎಂಬ ಹೆಸರಿನಲ್ಲಿ ಕಾರ್ಯನಿರ್ವಹಿಸುತ್ತಿದ್ದು, ಸೊಸೈಟಿಯ ಕಾರ್ಯ ನಿರ್ವಹಣೆಯಲ್ಲಿ ಯಾವುದೇ ಪೊಲೀಸ್ ಹಸ್ತಕ್ಷೇಪ ಇರುವುದಿಲ್ಲ ಹಾಗೂ ಈ ಬಗ್ಗೆ ಯಾವುದೇ ದೂರು ಅರ್ಜಿಗಳು ಬಂದಿರುವುದಿಲ್ಲ. |
| ಆ) | ಬಂದಿದ್ದಲ್ಲಿ, ಗೃಹ ನಿರ್ಮಾಣ ಸಹಕಾರ ಸಂಘದ ವ್ಯವಹಾರದಲ್ಲಿ ಆರಕ್ಷಕ ಠಾಣೆಯು ಮೂಗು ತೂರಿಸಲು ಅವಕಾಶವಿದೆಯೇ; | ಈ ಸೊಸೈಟಿಯ ವಿರುದ್ಧ ಸದಸ್ಯರಾದ ಶ್ರೀ ರಾಮಯ್ಯ ರವರ ದೂರಿನನ್ವಯ ಸೊಸೈಟಿಗೆ ಸಂಬಂಧಪಟ್ಟ ಅಧ್ಯಕ್ಷರು, ಕಾರ್ಯದರ್ಶಿಗಳ ವಿರುದ್ಧ 02 ಜಾತಿ ನಿಂದನೆ ಪ್ರಕರಣಗಳು ದಾಖಲಾಗಿರುತ್ತದೆ:–<br>1) ಸದಾಶಿವನಗರ ಪೊಲೀಸ್ ಠಾಣಾ ಮೊ.ಸಂ: 46/2013 ಕಲಂ:3(1) ಎಸ್‌ಸಿಎಸ್‌ಟಿ ಆಕ್ಟ್ ರೆ/ವಿ 34 ಐಪಿಸಿ.<br>2) ಶೇಷಾದ್ರಿಪುರಂ ಪೊಲೀಸ್ ಠಾಣೆ ಮೊ.ಸಂ: 114/2019 ಕಲಂ: 3(1)(ಆರ್(ಎಫ್)(ಜಿ) ಎಸ್‌ಸಿಎಸ್‌ಟಿ ಆಕ್ಟ್ ಮತ್ತು 120(ಬಿ) 420, 504, 506, ರೆ/ವಿ 34 ಐಪಿಸಿ.<br>2013 ನೇ ಸಾಲಿನ ಪ್ರಕರಣದಲ್ಲಿ ಮಾನ್ಯ ನ್ಯಾಯಾಲಯಕ್ಕೆ ಬಿ ಅಂತಿಮ ವರದಿ ಸಲ್ಲಿಸಿದ್ದು, 2019 ನೇ ಸಾಲಿನ ಪ್ರಕರಣ ತನಿಖಾ ಹಂತದಲ್ಲಿರುತ್ತದೆ. |

| | | |
|---|---|---|
| ಇ) | ಇಲ್ಲದಿದ್ದಲ್ಲಿ, ಭೂಮಿವಾದ/ ಕೋರ್ಟ್ ಇತ್ಯಾದಿ ಸಿವಿಲ್ ವಿಚಾರಗಳಿದ್ದಾಗ್ಯೂ ಪದೇ ಪದೇ ಮಾತುಕತೆಗಾಗಿ ಕರೆಸಿ ತೊಂದರೆ ನೀಡುತ್ತಿರುವ ಬಗ್ಗೆ ಸರ್ಕಾರದ ಕ್ರಮಗಳೇನು (ವಿವರ ಒದಗಿಸುವುದು); | ಅನ್ವಯಿಸುವುದಿಲ್ಲ. |
| ಈ) | ಕ್ರಿಮಿನಲ್ ಪ್ರಕರಣಗಳು ಅಲ್ಲದಿದ್ದರೂ ಸಹ ಈ ವಿಚಾರದಲ್ಲಿ ಪೊಲೀಸರ ಹಸ್ತಕ್ಷೇಪ ನಿಲ್ಲಿಸಲು ಸರ್ಕಾರ ಮುಂದಾಗುವುದೇ; ಇದನ್ನು ತಡೆಗಟ್ಟುವಲ್ಲಿ ಸರ್ಕಾರ ಈತನಕ ಕೈಗೊಂಡ ಕ್ರಮಗಳೇನು; ಠಾಣೆಗಳು ಮತ್ತು ಅಧಿಕಾರಿಗಳನ್ನು ಜನಸ್ನೇಹಿಯಾಗಿ ಮಾಡಲು ನಿಗದಿ ಮಾಡಿರುವ ಕ್ರಮಗಳೇನು; | ಅನ್ವಯಿಸುವುದಿಲ್ಲ. |
| ಉ) | ಇದಕ್ಕಾಗಿ ಲೈಜನರ್ಸ್ ಮೂಲಕ ಅಕ್ರಮ ವಸೂಲಿ ದಂಧೆಗೆ ಕುಮ್ಮಕ್ಕು ನೀಡುತ್ತಿರುವ ಮತ್ತು ಪ್ರಕರಣಗಳ ಒತ್ತಾಯ ಪೂರ್ವಕವಾದ ಇತ್ಯರ್ಥಕ್ಕೆ ಇತಿಶ್ರೀ ಹಾಡಲು ಮತ್ತು ಇಂತಹ ಪ್ರಕರಣಗಳ ತಡೆಗೆ ಯಾವ ಮುಂಜಾಗ್ರತಾ ಕ್ರಮುಗಳನ್ನು ಸರ್ಕಾರ ಕೈಗೊಂಡಿದೆ (ವಿವರ ಒದಗಿಸುವುದು)? | ಅನ್ವಯಿಸುವುದಿಲ್ಲ. |

ಹೆಚ್‌ಡಿ 103 ಎಸ್‌ಎಸ್‌ಟಿ 2020

(ಬಸವರಾಜ ಬೊಮ್ಮಾಯಿ)
ಗೃಹ ಸಚಿವರು



# ಕರ್ನಾಟಕ ಸರ್ಕಾರ

ಸಂಖ್ಯೆ:ನಅಇ 114 ಸಿಎಸ್‌ಎಸ್ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:23-03-2020

HH
US
24/3/2020

ಇಂದ:

ಸರ್ಕಾರದ ಪ್ರಧಾನ ಕಾರ್ಯದರ್ಶಿಗಳು,
ನಗರಾಭಿವೃದ್ಧಿ ಇಲಾಖೆ.

ಇವರಿಗೆ:

ಕಾರ್ಯದರ್ಶಿಗಳು
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ
ಬೆಂಗಳೂರು.

ಮಾನ್ಯರೆ,

**ವಿಷಯ:-** ವಿಧಾನಸಭೆ ಸದಸ್ಯರಾದ ಶ್ರೀ ಹ್ಯಾರಿಸ್ ಎನ್.ಎ (ಶಾಂತಿನಗರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:3030 ಕ್ಕೆ ಉತ್ತರ ನೀಡುವ ಕುರಿತು.

******

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ವಿಧಾನಸಭೆ ಸದಸ್ಯರಾದ ಶ್ರೀ ಹ್ಯಾರಿಸ್ ಎನ್.ಎ (ಶಾಂತಿನಗರ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ:3030 ಕ್ಕೆ ಉತ್ತರದ 50 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಕಳುಹಿಸಿ ಕೊಡಲು ನಾನು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

ಲಲಿತಾಬಾಯಿ. ಕೆ

**(ಲಲಿತಾಬಾಯಿ. ಕೆ)**
ಸರ್ಕಾರದ ಅಧೀನ ಕಾರ್ಯದರ್ಶಿ (ಯೋಮೇಕೋ),
ನಗರಾಭಿವೃದ್ಧಿ ಇಲಾಖೆ.

# ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 3030
ಸದಸ್ಯರ ಹೆಸರು : ಶ್ರೀ ಹ್ಯಾರಿಸ್ ಎನ್.ಎ (ಶಾಂತಿನಗರ)
ಉತ್ತರಿಸಬೇಕಾದ ದಿನಾಂಕ : 24-03-2020
ಉತ್ತರಿಸುವ ಸಚಿವರು : ಮಾನ್ಯ ಮುಖ್ಯಮಂತ್ರಿಗಳು.

<table>
<tr><th>ಕ್ರ. ಸಂ</th><th>ಪ್ರಶ್ನೆ</th><th>ಉತ್ತರ</th></tr>
<tr><td>ಅ)</td><td>ಬೆಂಗಳೂರು ಸ್ಮಾರ್ಟ್ ಸಿಟಿ ಯೋಜನೆಯ ಅನುಷ್ಠಾನದ ಕುರಿತಾದ ವಿವರಗಳು ಮತ್ತು ಯೋಜನಾನುಷ್ಠಾನಕ್ಕೆ ಹಂತ ಹಂತವಾಗಿ ನಿಗಧಿಪಡಿಸಿರುವ ಮೊತ್ತವೆಷ್ಟು; ಕೇಂದ್ರ ಸರ್ಕಾರ ಬಿಡುಗಡೆ ಮಾಡಿರುವ ಅನುದಾನದ ಮೊತ್ತವೆಷ್ಟು;</td><td>ಬೆಂಗಳೂರು ನಗರವು ಸ್ಮಾರ್ಟ್ ಸಿಟಿ ಯೋಜನೆಯಡಿ 3ನೇ ಹಂತದಲ್ಲಿ ದಿನಾಂಕ 23.06.2017ರಂದು ಆಯ್ಕೆಯಾಗಿರುತ್ತದೆ. ಯೋಜನೆಯ ಅನುಷ್ಠಾನಕ್ಕೆ ಬೆಂಗಳೂರು ಸ್ಮಾರ್ಟ್ ಸಿಟಿ ಲಿಮಿಟೆಡ್‌ನ್ನು ದಿನಾಂಕ:03.01.2018 ರಂದು ಸ್ಥಾಪಿಸಲಾಗಿರುತ್ತದೆ.<br><br>ಅಭಿಯಾನದ ಅವಧಿಯು 5 ವರ್ಷಗಳಾಗಿರುತ್ತದೆ (2015-16 ರಿಂದ 2019-20). ಈ 5 ವರ್ಷಗಳ ಅವಧಿಯಲ್ಲಿ ಪ್ರತೀ ನಗರವು ಕೇಂದ್ರ ಹಾಗೂ ರಾಜ್ಯ ಸರ್ಕಾರಗಳಿಂದ ಪ್ರತಿ ವರ್ಷ ತಲಾ ರೂ.100 ಕೋಟಿಗಳಂತೆ ಯೋಜನಾವಧಿಯಲ್ಲಿ ಒಟ್ಟು ರೂ.1,000 ಕೋಟಿ ಹಂಚಿಕೆಯನ್ನು ಪಡೆಯಲಿವೆ.<br><br>ಇಲ್ಲಿಯವರೆಗೆ ಬೆಂಗಳೂರು ಸ್ಮಾರ್ಟ್ ಸಿಟಿ ಲಿಮಿಟೆಡ್‌ಗೆ ಕೇಂದ್ರ ಸರ್ಕಾರದಿಂದ ಬಿಡುಗಡೆ ಮಾಡಲಾದ ಅನುದಾನದ ವಿವರಗಳು ಈ ಕೆಳಕಂಡಂತಿವೆ:<br><br>
<table>
<tr><th>ವರ್ಷ</th><th>ಕೇಂದ್ರ ಸರ್ಕಾರದಿಂದ ಅನುದಾನ ಸ್ವೀಕರಿಸಿದ ದಿನಾಂಕ</th><th>ಮೊತ್ತ (ರೂ.ಕೋಟಿ ಗಳಲ್ಲಿ)</th><th>ವಿವರ</th></tr>
<tr><td>2017-18</td><td>-</td><td>-</td><td>-</td></tr>
<tr><td rowspan="2">2018-19</td><td>07.08.2019</td><td>50.00</td><td>ಯೋಜನೆ</td></tr>
<tr><td>29.01.2019</td><td>5.00</td><td>ಯೋಜನೇತರ (A&OE)</td></tr>
<tr><td>2019-20</td><td>14.08.2019</td><td>100.00</td><td>ಯೋಜನೆ</td></tr>
<tr><td></td><td>ಒಟ್ಟು</td><td>155.00</td><td></td></tr>
</table></td></tr>
<tr><td>ಆ)</td><td>ಸ್ಮಾರ್ಟ್ ಸಿಟಿ ಯೋಜನೆಯ ಮೊದಲ ಭಾಗವಾಗಿ ಯಾವ ಯಾವ ಕಾಮಗಾರಿಗಳನ್ನು ಕೈಗೊಳ್ಳಲು ಕ್ರಿಯಾಯೋಜನೆ ರೂಪಿಸಿದೆ;</td><td>ಒಟ್ಟಾರೆ ಅನುದಾನವಾದ ರೂ.1000.00 ಕೋಟಿಗೆ 27 ಕಾಮಗಾರಿಗಳಿಗೆ ಕ್ರಿಯಾ ಯೋಜನೆ ರೂಪಿಸಿ ಅನುಮೋದನೆ ಪಡೆಯಲಾಗಿದೆ ಹಾಗೂ ನಿಯಮಾನುಸಾರ ಕಾಮಗಾರಿಗಳನ್ನು ಅನುಷ್ಠಾನಗೊಳಿಸಲಾಗುತ್ತಿದೆ. ಕಾಮಗಾರಿ ವಿವರಗಳನ್ನು ಅನುಬಂಧ-1 ರಲ್ಲಿ ನೀಡಿದೆ.</td></tr>
<tr><td>ಇ)</td><td>ಸದರಿ ಯೋಜನೆಯ ಕಾಮಗಾರಿಗಳನ್ನು ಎಷ್ಟು ಹಂತದಲ್ಲಿ ಪೂರ್ಣಗೊಳಿಸಲು ಯೋಜನೆ ರೂಪಿಸಲಾಗಿದೆ;</td><td>ಅಭಿಯಾನದ ಮಾರ್ಗಸೂಚಿಯಂತೆ ಸ್ಮಾರ್ಟ್ ಸಿಟಿ ಯೋಜನೆಯ ಕಾಮಗಾರಿಗಳನ್ನು 5 ವರ್ಷದೊಳಗೆ ಪೂರ್ಣಗೊಳಿಸಲು ಯೋಜಿಸಲಾಗಿದೆ.</td></tr>
<tr><td>ಈ)</td><td>ಈ ಯೋಜನಾನುಷ್ಠಾನದಲ್ಲಿ ಪರಿಪೂರ್ಣತೆ ಮತ್ತು ಕಾಮಗಾರಿಗಳ ಗುಣಮಟ್ಟವನ್ನು ಖಚಿತಪಡಿಸುವಲ್ಲಿ ಅನುಸರಿಸುತ್ತಿರುವ ನೀತಿ -ನಿಯಮಗಳು ಯಾವುವು?</td><td>ಯೋಜನೆಗಳ ಪರಿಪೂರ್ಣತೆ ದೃಷ್ಠಿಯಿಂದ ಕಾಮಗಾರಿಗಳ ಅನುಷ್ಠಾನದ ಉಸ್ತುವಾರಿಯನ್ನು ಬೆಂಗಳೂರು ಸ್ಮಾರ್ಟ್ ಸಿಟಿ ಲಿಮಿಟೆಡ್‌ನ ತಾಂತ್ರಿಕ ಸಿಬ್ಬಂದಿಗಳು ನಿರ್ವಹಿಸುತ್ತಿದ್ದಾರೆ. ಸದರಿ ಕಾಮಗಾರಿಗಳ ಸಮರ್ಪಕ ಅನುಷ್ಠಾನವನ್ನು ನಿರಂತರವಾಗಿ ಪರಿಶೀಲಿಸಲು ಮತ್ತು ಗುಣಮಟ್ಟವನ್ನು ಖಚಿತಪಡಿಸಲು ಯೋಜನಾ ನಿರ್ವಹಣಾ ಸಮಾಲೋಚಕರನ್ನಾಗಿ ಮೆ॥ ಐಡೆಕ್ ಸಂಸ್ಥೆಯನ್ನು ನೇಮಿಸಿಕೊಳ್ಳಲಾಗಿದೆ.<br><br>ಮುಂದುವರೆದು, ಟೆಂಡರ್ ನಿಯಮದ ಪ್ರಕಾರ ಗುತ್ತಿಗೆದಾರರ ಪತಿಯಿಂದಲೂ ಗುಣನಿಯಂತ್ರಣ ಪ್ರಯೋಗಾಲಯವನ್ನು ಸ್ಥಾಪಿಸಿ, ಗುಣಮಟ್ಟವನ್ನು ಪರಿಶೀಲಿಸಲಾಗುತ್ತಿದೆ. ಹಲವು ಘಟಂಗಳಾದ HDPE ಪೈಪುಗಳು, HUME ಪೈಪುಗಳನ್ನು ತಯಾರಿಸುವ ಕಾರ್ಖಾನೆಯಲ್ಲಿ ಗುಣಮಟ್ಟವನ್ನು ಪರಿಶೀಲಿಸಿ ಖಚಿತಪಡಿಸಿಕೊಳ್ಳಲಾಗುತ್ತಿದೆ. ಇದಲ್ಲದೆ ಕಾಮಗಾರಿಗಳ ಸ್ಥಳಗಳಲ್ಲಿ ದೈನಂದಿನ ತಪಾಸಣೆಗಳು ಮತ್ತು ಸೈಟ್‌ನಲ್ಲಿ ಅಗತ್ಯ ಗುಣಮಟ್ಟದ ಪರೀಕ್ಷೆಯನ್ನು ನಡೆಸಲಾಗುತ್ತಿದೆ.</td></tr>
</table>

ಸಂಖ್ಯೆ: ನಅಇ 114 ಸಿಎಸ್‌ಎಸ್ 2020

ಬಿ.ಎಸ್. ಯಡಿಯೂರಪ್ಪ
(ಬಿ.ಎಸ್.ಯಡಿಯೂರಪ್ಪ)
ಮುಖ್ಯಮಂತ್ರಿಗಳು.

ಅನುಬಂಧ-1

| | | | | | | |
|---|---|---|---|---|---|---|
| BENGALURU SMART CITY LTD PROJECT STATUS<br>PROJECT List<br>AS ON 18-03-2020<br>ALL IN CRORES | | | | | | |
| **S. No.** | **Project Type** | **Project-ID** | **Project Name** | **DRP Cost** | **Stage** | **Remarks** |
| 1 | ABD | KAR-BEN-046 | 1. Commercial Street-From Kamraj Road to Jumma Masjid Road (Near Bowring Hospital)<br>2 Kamaraj Road from M G Road up to Commercial Street and up to St. Johns Church Road | 35.31 | Work Order Issued & Work Under Progress | |
| 2 | ABD | KAR-BEN-047 | 1. Ulsoor Road from Dickenson Road to Kensington Road<br>2. Dickenson Road from M G Road to Kamraj Road | 29.21 | Work Order Issued & Work Under Progress | |
| 3 | ABD | KAR-BEN-048 | 1. Infantry Road from Ali Askar Road to Safina Plaza complex (Main Guard Cross Road)<br>2. Central Street from M G Road to Shivajinagar Bus Stand (TTMC) and up to Indian Express (Balekundri) Junction<br>3. Bowring Hospital Road from Main Guard Cross Road to HSIS Gosha Hospital | 53.44 | Work Order Issued & Work Under Progress | |
| 4 | ABD | KAR-BEN-049 | 1. Millers Road from Chalukya Circle to Cantonment via Queens Road<br>2. Raj Bhavan Road from Minsk Square to Basaveshwara Circle | 39.73 | Work Order Issued & Work Under Progress | |
| 5 | ABD | KAR-BEN-050 | 1. Mcgrath Road from Brigade Road up to Richmond Road<br>2. Convent Road from Richmond Road to Residency Road<br>3. Hayes Road from Richmond Road to Residency Road<br>4 Wood Street from Museum Road to Richmond Road<br>5 Castle Street from Museum Road to Richmond Road<br>6 Tate Lane - From Richmond road to castle street | 29.78 | Work Order Issued & Work Under Progress | |
| 6 | ABD | KAR-BEN-051 | 1 Kasturba Road from Siddalingaiah Circle to Minsq Square via Queens Statue (M G Road)<br>2. Queens Road from M G Road to Cantonment Railway Station | 45.61 | Work Order Issued & Work Under Progress | |
| 7 | ABD | KAR-BEN-052 | 1. Raja Ram Mohan Roy Road from Richmond Circle to Hudson Circle<br>2. Lavelle Road from M.G.Road to Richmond Circle.<br>3. Brigade Road from M.G.Road to War Memorial Junction. | 39.67 | Work Order Issued & Work Under Progress | |
| 8 | ABD | KAR-BEN-053 | 1 St.John's Road - from Kensington Road to St.John's Church Road<br>2. St John's Church Road (New Bamboo Bazar Road to Promenade Road) | 42.76 | Work Order Issued & Work Under Progress | |
| 9 | ABD | KAR-BEN-054 | 1.Miller's Road Extension (from Miller's Road Underpass to Haines Circle)<br>2. Cantonment Road (from Millers Road to Queens Road)<br>3. HKP Road (from Queens Road to Russel Market) | 41.67 | Work Order Issued & Work Under Progress | |
| 10 | ABD | KAR-BEN-055 | 1. Jumma Masjid Road - from Bowring Hospital Road Road to Russel Market<br>2. Chandni Chowk Road. - from HKP Road to Shivaji Road | 16.22 | Work Order Issued & Work Under Progress | |

| | | | | | |
|---|---|---|---|---|---|
| 11 | ABD | KAR-BEN-056 | 1. Sethu Rao Road (from Mysore Road Junction to G P Road)<br>2. Sethu Rao Cross Road (from Iyengar Road to Sethu Rao Road Junction)<br>3. NR Road (from SJP Road Junction to Cutchery Road Junction)<br>4. SJP Road (from KR Market Circle to NR Road Junction) | 28.10 | Work Order Issued & Work Under Progress |
| 12 | ABD | KAR-BEN-057 | 1.Race Course Road (from Palace Road to Hare Krishna Road)<br>2. Rajbhavan Road (from Millers Road Intersection to Ali Asker Road Intersection)<br>3. Palace Road (from Millers Road Intersection to Basaveshwara Circle) | 46.80 | Work Order Issued & Work Under Progress |
| 13 | ABD | KAR-BEN-058 | 1. Avenue Road - from Mysore Bank Circle to SJP Road<br>2. Rhenius Street - from General KS Thimmaya Road to Langford Road | 24.90 | Work Order Issued & Work Under Progress |
| 14 | ABD | KAR-BEN-023 | Integrated mobility towards creating vibrant destination Shivajinagar Bus Terminal Redevelopment (Terminus + Parking Structure + Subway) | 2.72 | Work Order to be Issued |
| 15 | ABD | KAR-BEN-025 | Protection and Redevelopment of a Botanically Varied Parkland - Cubbon Park Phase A | 16.73 | Work Order to be Issued |
| 16 | ABD | KAR-BEN-065 | Protection and Redevelopment of a Botanically Varied Parkland - Cubbon Park - Phase B | 20.00 | Tender |
| 17 | ABD | KAR-BEN-067 | LED Lighting for Vidhan Soudha, Vikas Soudha, MS Building and VV Towers | 2.04 | Tender |
| 18 | ABD | KAR-BEN-062 | KR Market Junction Integrated Mobility and Junction Improvement | 20.00 | DPR |
| 19 | ABD | KAR-BEN-062 | Redevelopment of historic economic Centres - KR Market | 58.69 | DPR |
| 20 | ABD | KAR-BEN-063 | Setting up of Auditorium Block and Geological Rock Garden at Jawaharlal Nehru Planetarium | 20.00 | DPR |
| 21 | ABD | KAR-BEN-064 | Transformation of Freedom Park Bengaluru into World Class Visual and Digital Experience destination | 10.00 | DPR |
| 22 | PAN-CITY | KAR-BEN-068 | Solid Waste Management Command Centre – Civil Works | 1.47 | Concept Stage |
| 23 | PAN-CITY | KAR-BEN-061 | Command and Control Centre for Solid Waste Management Department, of BBMP | 37.20 | Tender |
| 24 | PAN-CITY | KAR-BEN-066 | Proposal for operation of electric buses feeder service to Namma Metro by BMTC – Fleet Procurement | 50.00 | Tender |
| 25 | PAN-CITY | KAR-BEN-041 | ICCC - (Integrated Command and Control Centre) | 250.00 | DPR |
| 26 | PAN-CITY | KAR-BEN-036 | Improvement of Property Tax collections for the city in a phased manner | 5.00 | Work Order Issued & Work Under Progress |
| 27 | ABD | KAR-BEN-069 | Project Rashmi - Women's Space at Workplace | 2.00 | DPR |
| | | | **Grand Total** | 969.05 | |

<u>ಕರ್ನಾಟಕ ಸರ್ಕಾರ</u>

**ಸಂಖ್ಯೆ: HD/25/PPS/2020-HD_PSB**
**ಲಗತ್ತು:** 100 ಪ್ರತಿಗಳು

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಧಾನಸೌಧ, ಬೆಂಗಳೂರು
ದಿನಾಂಕ: 23.03.2020

**ಇಂದ,**

ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಒಳಾಡಳಿತ ಇಲಾಖೆ,
ಬೆಂಗಳೂರು

**ಇವರಿಗೆ,**

ಕಾರ್ಯದರ್ಶಿಗಳು
ಕರ್ನಾಟಕ ವಿಧಾನ ಸಭೆ ಸಚಿವಾಲಯ
ವಿಧಾನಸೌಧ,
ಬೆಂಗಳೂರು.

**ಮಾನ್ಯರೇ,**

**ವಿಷಯ:** 15ನೇ ವಿಸ/6ನೇಅ - ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಅನಿಲ್ ಚಿಕ್ಕಮಾದು (ಹೆಚ್.ಡಿ. ಕೋಟೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2861ಕ್ಕೆ ಉತ್ತರ ನೀಡುವ ಕುರಿತು

**ಉಲ್ಲೇಖ:** ಕಾರ್ಯದರ್ಶಿ, ಕರ್ನಾಟಕ ವಿಧಾನ ಸಭೆ ಇವರ ಪತ್ರ ಸಂಖ್ಯೆ: ಪ್ರಶಾವಿಸ/15ನೇವಿಸ/6ಅ/ಪ್ರ.ಸಂ.2861/2020 ದಿನಾಂಕ 10.03.2020

* * * * *

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, ಮಾನ್ಯ ವಿಧಾನಸಭಾ ಸದಸ್ಯರಾದ ಶ್ರೀ ಅನಿಲ್ ಚಿಕ್ಕಮಾದು (ಹೆಚ್.ಡಿ. ಕೋಟೆ) ಇವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ: 2861ಕ್ಕೆಸಂಬಂಧಿಸಿದಂತೆ ಉತ್ತರದ 100 ಪ್ರತಿಗಳನ್ನು ಇದರೊಂದಿಗೆ ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ಕಳುಹಿಸಿಕೊಡಲು ನಿರ್ದೇಶಿತನಾಗಿದ್ದೇನೆ.

ತಮ್ಮ ನಂಬುಗೆಯ,

(ಹೆಚ್. ಎಂ. ರಾಘವೇಂದ್ರ)
ಸರ್ಕಾರದ ಅಧೀನ ಕಾರ್ಯದರ್ಶಿ,
ಒಳಾಡಳಿತ ಇಲಾಖೆ (ಪೊಲೀಸ್ ಸೇವೆಗಳು-ಬಿ)

**ಕರ್ನಾಟಕ ವಿಧಾನ ಸಭೆ**

| | | | |
|---|---|---|---|
| 01. | ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 2861 |
| 02. | ಸದಸ್ಯರ ಹೆಸರು | : | ಶ್ರೀ ಅನಿಲ್ ಚಿಕ್ಕಮಾದು (ಹೆಚ್.ಡಿ. ಕೋಟೆ) |
| 03. | ಉತ್ತರಿಸುವ ದಿನಾಂಕ | : | 24.03.2020 |
| 04. | ಉತ್ತರಿಸುವ ಸಚಿವರು | : | ಗೃಹ ಸಚಿವರು |

| ಕ್ರ. ಸಂ | ಪ್ರಶ್ನೆ | ಉತ್ತರ |
|---|---|---|
| ಅ) | ಪೋಲೀಸ್ ಹೌಸಿಂಗ್ ಸೊಸೈಟಿಯಿಂದ ಎಲ್ಲಾ ವೃಂದದ ಪೋಲೀಸ್ ಸಿಬ್ಬಂದಿಗಳಿಗೆ ಅನ್ಯಾಯವಾಗುತ್ತಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ ಹಾಗಿದ್ದಲ್ಲಿ, ಇದುವರೆಗೆ ಎಲ್ಲಾ ವೃಂದದ ಪೋಲೀಸ್ ಸಿಬ್ಬಂದಿಗಳಿಂದ ಸ್ವೀಕರಿಸಿರುವ ಒಟ್ಟು ಮೊತ್ತವೆಷ್ಟು; (ಸಿಬ್ಬಂದಿವಾರು ಸ್ವೀಕರಿಸಿರುವ ಮೊತ್ತದ ಸಂಪೂರ್ಣ ವಿವರ ನೀಡುವುದು) | ಜಿಲ್ಲಾ ಘಟಕಗಳಿಗೆ ಸಂಬಂಧಿಸಿದಂತೆ ಯಾವುದೇ ಪೋಲೀಸ್ ಹೌಸಿಂಗ್ ಸೊಸೈಟಿಗಳು ಇರುವುದಿಲ್ಲ. ಮೈಸೂರು ನಗರದಲ್ಲಿ ಕೆಲವು ಖಾಸಗೀ ಪೋಲೀಸ್ ಹೌಸಿಂಗ್ ಸೊಸೈಟಿಗಳಿದ್ದು, ಈ ಸೊಸೈಟಿಗಳಿಗೂ ಮೈಸೂರು ನಗರ ಪೋಲೀಸ್ ಘಟಕಕ್ಕೂ ಸಂಬಂಧವಿರುವುದಿಲ್ಲ ಹಾಗೂ ನಿವೇಶನ ನೀಡುವುದಾಗಿ ಪೋಲೀಸರಿಗೆ ವಂಚಿಸಿರುವ ಬಗ್ಗೆ ಯಾವುದೇ ಪ್ರಕರಣಗಳು ಮೈಸೂರು ನಗರ ವ್ಯಾಪ್ತಿಯಲ್ಲಿ ದಾಖಲಾಗಿರುವುದಿಲ್ಲ. |
| ಆ) | ಸದರಿ ಸೊಸೈಟಿಯ ಕಾರ್ಯವ್ಯಾಪ್ತಿ ಮತ್ತು ರೂಪುರೇಷೆಗಳು ಹಾಗೂ ಸೊಸೈಟಿಯ ಗುರಿ ಮತ್ತು ಉದ್ದೇಶಗಳೇನು; (ಬೈಲಾ ಪ್ರತಿಯೊಂದಿಗೆ ಪೂರ್ಣ ವಿವರ ನೀಡುವುದು) | ಉದ್ಭವಿಸುವುದಿಲ್ಲ |
| ಇ) | ಪೋಲೀಸ್ ಸಿಬ್ಬಂದಿಗಳಿಗೆ ನಿವೇಶನಗಳನ್ನು ನೀಡಲು ಖಾಸಗಿ ವ್ಯಕ್ತಿ ಮತ್ತು ಸಂಸ್ಥೆಗಳಿಂದ ಜಮೀನು ಖರೀದಿ ಮಾಡಲು ಕಳೆದ ಐದು ವರ್ಷಗಳಿಂದ ಈವರೆಗೆ ಸದರಿ ಸೊಸೈಟಿಯಿಂದ ಮುಂಗಡ ಮತ್ತು ಪೂರ್ತಿ ಪ್ರಮಾಣದಲ್ಲಿ ಎಷ್ಟು ಹಣ ಪಾವತಿಸಲಾಗುವುದು; (ಪೂರ್ಣ ವಿವರ ನೀಡುವುದು) | |
| ಈ) | ಹಾಗಿದ್ದಲ್ಲಿ, ಖಾಸಗಿ ವ್ಯಕ್ತಿ ಮತ್ತು ಸಂಸ್ಥೆಗಳಿಗೆ ಪಾವತಿಸಿರುವ ಹಣದ ಕರಾರು ಪ್ರತಿಗಳೊಂದಿಗೆ ದಿನಾಂಕವಾರು ಹಣದ ವರ್ಗಾವಣೆಯ ಸಂಪೂರ್ಣ ವಿವರಗಳನ್ನು ನೀಡುವುದು; | |
| ಉ) | ಖಾಸಗಿ ವ್ಯಕ್ತಿ ಮತ್ತು ಸಂಸ್ಥೆಗಳಿಗೆ ಮುಂಗಡ ಮತ್ತು ಪೂರ್ತಿ ಪ್ರಮಾಣದ ಹಣ ನೀಡಿ ಇದುವರೆಗೆ ಎಷ್ಟು ಜಮೀನು ಖರೀದಿ ಮಾಡಲಾಗಿದೆ; ಎಷ್ಟು ನಿವೇಶನ ಹಂಚಿಕೆ ಮಾಡಲಾಗಿದೆ; ಹಂಚಿಕೆಯಾಗದಿದ್ದಲ್ಲಿ, ಕಾರಣಗಳೇನು; (ವಿವರ ನೀಡುವುದು) | |
| ಊ) | ಪೋಲೀಸ್ ಸಿಬ್ಬಂದಿಗಳಿಗೆ ಆಗಿರುವ ಅನ್ಯಾಯವನ್ನು ಸರಿಪಡಿಸುವ ಕುರಿತು ಸರ್ಕಾರದ ನಿಲುವೇನು; (ವಿವರ ನೀಡುವುದು)? | |

HD/25/PPS/2020-PS_B

(ಬಸವರಾಜ ಬೊಮ್ಮಾಯಿ)
ಗೃಹ ಸಚಿವರು

# ಕರ್ನಾಟಕ ಸರ್ಕಾರ

**ಸಂಖ್ಯೆ:** ಇಎನ್ 67 ಪಿಪಿಎಂ 2020

ಕರ್ನಾಟಕ ಸರ್ಕಾರದ ಸಚಿವಾಲಯ,
ವಿಕಾಸ ಸೌಧ,
ಬೆಂಗಳೂರು, ದಿನಾಂಕ:23.03.2020

ಇಂದ:
ಸರ್ಕಾರದ ಅಪರ ಮುಖ್ಯ ಕಾರ್ಯದರ್ಶಿ,
ಇಂಧನ ಇಲಾಖೆ,
ಬೆಂಗಳೂರು.

ಚುಕ್ಕೆ ಗುರುತಿನ ಪ್ರಶ್ನೆ

★

ಇವರಿಗೆ:
ಕಾರ್ಯದರ್ಶಿ,
ಕರ್ನಾಟಕ ವಿಧಾನಸಭೆ,
ವಿಧಾನ ಸೌಧ,
ಬೆಂಗಳೂರು.

(3) Stored 24/3/2020

ಮಾನ್ಯರೇ,

**ವಿಷಯ:** **ಮಾನ್ಯ ವಿಧಾನ ಸಭೆಯ ಸದಸ್ಯರಾದ** ಡಾ॥ ಅಂಜಲಿಹೇಮಂತ್ ನಿಂಬಾಳ್ಕರ್ ರವರ ಚುಕ್ಕೆಗುರುತಿನಪ್ರಶ್ನೆ **ಸಂಖ್ಯೆ: 866**ಕ್ಕೆ ಉತ್ತರಿಸುವ ಬಗ್ಗೆ.

*****

ಮೇಲ್ಕಂಡ ವಿಷಯಕ್ಕೆ ಸಂಬಂಧಿಸಿದಂತೆ, **ಮಾನ್ಯ ವಿಧಾನ ಸಭೆಯ ಸದಸ್ಯರಾದ** ಡಾ॥ ಅಂಜಲಿಹೇಮಂತ್ ನಿಂಬಾಳ್ಕರ್ **ರವರ** ಚುಕ್ಕೆ ಗುರುತಿನ **ಪ್ರಶ್ನೆ ಸಂಖ್ಯೆ: 866**ಕ್ಕೆ ಉತ್ತರಗಳ 350 ಪ್ರತಿಗಳನ್ನು ಲಗತ್ತಿಸಿ ಮುಂದಿನ ಸೂಕ್ತ ಕ್ರಮಕ್ಕಾಗಿ ತಮಗೆ ಕಳುಹಿಸಲು ನಿರ್ದೇಶಿಸಲ್ಪಟ್ಟಿದ್ದೇನೆ.

ತಮ್ಮ ವಿಶ್ವಾಸಿ,

N. mangalagowri

(ಎನ್.ಮಂಗಳಗೌರಿ)
ಸರ್ಕಾರದ ಅಧೀನ ಕಾರ್ಯದರ್ಶಿ
ಇಂಧನ ಇಲಾಖೆ.

## ಕರ್ನಾಟಕ ವಿಧಾನಸಭೆ

ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ : 866

ಸದಸ್ಯರ ಹೆಸರು : ಡಾ: ಅಂಜಲಿ ಹೇಮಂತ್ ನಿಂಬಾಳ್ಕರ್ (ಖಾನಾಪುರ)

ಉತ್ತರಿಸಬೇಕಾದ ದಿನಾಂಕ : 24-03-2020

ಉತ್ತರಿಸುವ ಸಚಿವರು : ಮುಖ್ಯಮಂತ್ರಿ

****

| | ಪ್ರಶ್ನೆ | ಉತ್ತರ |
|---|---|---|
| ಅ) | ಖಾನಾಪುರ ತಾಲ್ಲೂಕಿನಲ್ಲಿ ವಿದ್ಯುತ್ ಸರಬರಾಜು ಸಮಸ್ಯೆಗಳಿಗೆ ತ್ವರಿತವಾಗಿ ಸ್ಪಂದಿಸಲು ಅಗತ್ಯ ಸಿಬ್ಬಂದಿ ಇಲ್ಲದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; | ಖಾನಾಪುರ ತಾಲ್ಲೂಕಿನಲ್ಲಿ ವಿದ್ಯುತ್ ಸರಬರಾಜು ಸಮಸ್ಯೆಗಳಿಗೆ ತ್ವರಿತವಾಗಿ ಸ್ಪಂದಿಸಲು ಅಗತ್ಯ ಸಿಬ್ಬಂದಿಗಳ ಕೊರತೆ ಇರುವುದು (ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯ) ಸರ್ಕಾರದ ಗಮನಕ್ಕೆ ಬಂದಿರುತ್ತದೆ. ಆದಾಗ್ಯೂ, ವಿದ್ಯುತ್ ಸರಬರಾಜು ಸಮಸ್ಯೆಗಳಿಗೆ ತ್ವರಿತವಾಗಿ ಸ್ಪಂದಿಸಲು ಅನುಕೂಲವಾಗುವಂತೆ ಹೊರ ಗುತ್ತಿಗೆ ಮೂಲಕ 24x7 ವಾಹನ ಮತ್ತು 7 ಜನ ಸಿಬ್ಬಂದಿಗಳನ್ನು ನೇಮಿಸಿಕೊಂಡು ಕೆಲಸ ನಿರ್ವಹಿಸಲಾಗುತ್ತಿದೆ. |
| ಆ) | ಹೆಸ್ಕಾಂ ನ ಖಾನಾಪುರ ಉಪ ವಿಭಾಗದಲ್ಲಿ ಮಂಜೂರಾದ ಹುದ್ದೆಗಳು ಮತ್ತು ಹಾಲಿ ಖಾಲಿ ಇರುವ ಹುದ್ದೆಗಳೆಷ್ಟು; (ಸಂಪೂರ್ಣ ಮಾಹಿತಿಯನ್ನು ಒದಗಿಸುವುದು) | ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯ ಖಾನಾಪುರ ಉಪವಿಭಾಗದಲ್ಲಿ 272 ಹುದ್ದೆಗಳು ಮಂಜೂರಾಗಿದ್ದು, 126 ಸಿಬ್ಬಂದಿಗಳು ಕಾರ್ಯನಿರ್ವಹಿಸುತ್ತಿರುತ್ತಾರೆ ಹಾಗೂ 146 ಹುದ್ದೆಗಳು ಖಾಲಿ ಇದ್ದು, ಹುದ್ದೆವಾರು ವಿವರಗಳನ್ನು ಅನುಬಂಧದಲ್ಲಿ ಒದಗಿಸಲಾಗಿದೆ. |
| ಇ) | ಸದರಿ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲು ಸರ್ಕಾರವು ಕೈಗೊಂಡ ಕ್ರಮಗಳೇನು; ಯಾವ ಕಾಲಮಿತಿಯೊಳಗೆ ಖಾಲಿ ಹುದ್ದೆಗಳನ್ನು ಭರ್ತಿ ಮಾಡಲಾಗುವುದು? | ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿ ನಿಯಮಿತದ ವ್ಯಾಪ್ತಿಯಲ್ಲಿ ಖಾನಾಪುರ ಉಪ ವಿಭಾಗದಲ್ಲಿ ಖಾಲಿ ಇರುವ ಹುದ್ದೆಗಳು ಸೇರಿದಂತೆ ಒಟ್ಟು ಖಾಲಿ ಇರುವ ಹುದ್ದೆಗಳಿಗೆ ನೇರ ನೇಮಕಾತಿ ಕೋಟಾದಡಿಯಲ್ಲಿ ಭರ್ತಿ ಮಾಡಲು ಕವಿಪ್ರನಿನಿಯಿಂದ ಸಾಮಾನ್ಯ ಉದ್ಯೋಗ ಪ್ರಕಟಣೆಯನ್ನು ದಿನಾಂಕ: 25.02.2019 ರಂದು ಜಾರಿ ಮಾಡಲಾಗಿರುತ್ತದೆ. ಸದರಿ ನೇಮಕಾತಿ ಪ್ರಕ್ರಿಯೆಯು ಜಾರಿಯಲ್ಲಿರುತ್ತದೆ. (see table below) ಖಾನಾಪುರ ಉಪವಿಭಾಗದಲ್ಲಿ ಖಾಲಿ ಹುದ್ದೆಗಳಿಗೆ ಪ್ರತ್ಯೇಕವಾಗಿ ಯಾವುದೇ ನೇಮಕಾತಿಯನ್ನು ಕೈಗೊಳ್ಳಲಾಗಿರುವುದಿಲ್ಲ. ಆದಾಗ್ಯೂ ಖಾಲಿ ಇರುವ ಹುದ್ದೆಗಳ ಅವಶ್ಯಕತೆಗನುಗುಣವಾಗಿ ನೇರ ನೇಮಕಾತಿ ಮೂಲಕ ಮತ್ತು ಮಾನ್ಯ ಉಚ್ಛ ನ್ಯಾಯಾಲಯದಲ್ಲಿ ಬಾಕಿ ಇರುವ ಜ್ಯೇಷ್ಠತಾ ಪಟ್ಟಿ ಪ್ರಕರಣವು ಇತ್ಯರ್ಥಗೊಂಡ ನಂತರ ಪದೋನ್ನತಿ ನೀಡುವುದರ ಮೂಲಕ ಭರ್ತಿ ಮಾಡಲು ಕ್ರಮ ಕೈಗೊಳ್ಳಲಾಗುವುದು. |

| ಕ್ರಸಂ | ಹುದ್ದೆಯ ಹೆಸರು | ಹುದ್ದೆಗಳ ಸಂಖ್ಯೆ |
|---|---|---|
| 1 | ಸಹಾಯಕ ಇಂಜಿನಿಯರ್ (ವಿ.) | 160 |
| 2 | ಸಹಾಯಕ ಇಂಜಿನಿಯರ್ (ಸಿವಿಲ್) | 3 |
| 3 | ಕಿರಿಯ ಇಂಜಿನಿಯರ್ (ವಿ.) | 50 |
| 4 | ಕಿರಿಯ ಇಂಜಿನಿಯರ್ (ಸಿವಿಲ್.) | 8 |
| 5 | ಕಿರಿಯ ಆಪ್ತ ಸಹಾಯಕ | 11 |
| 6 | ಕಿರಿಯ ಪವರ್‌ಮ್ಯಾನ್ | 465 |
| | ಒಟ್ಟು | 697 |

ಸಂಖ್ಯೆ: ಎನರ್ಜಿ 67 ಪಿಪಿಎಂ 2020

(ಬಿ.ಎಸ್.ಯಡಿಯೂರಪ್ಪ)

ಮುಖ್ಯಮಂತ್ರಿ

ಮಾನ್ಯ ವಿಧಾನ ಸಭೆಯ ಸದಸ್ಯರಾದ ಡಾ: ಅಂಜಲಿ ಹೇಮಂತ್ ನಿಂಬಾಳ್ಕರ್ ರವರ ಚುಕ್ಕೆ ಗುರುತಿನ ಪ್ರಶ್ನೆ ಸಂಖ್ಯೆ 866ಕ್ಕೆ ಅನುಬಂಧ

ಹುಬ್ಬಳ್ಳಿ ವಿದ್ಯುತ್ ಸರಬರಾಜು ಕಂಪನಿಯ ಖಾನಾಪುರ ಉಪವಿಭಾಗದಲ್ಲಿ ಮಂಜೂರಾಗಿರುವ, ಕಾರ್ಯನಿರ್ವಹಿಸುತ್ತಿರುವ ಹಾಗೂ ಖಾಲಿ ಇರುವ ಹುದ್ದೆವಾರು ವಿವರಗಳು

| ಹುದ್ದೆಗಳ ಹೆಸರು | ಮಂಜೂರಾದ ಹುದ್ದೆಗಳ ಒಟ್ಟು ಸಂಖ್ಯೆ | ಕಾರ್ಯ ನಿರ್ವಹಿಸುತ್ತಿರುವ ಹುದ್ದೆಗಳ ಒಟ್ಟು ಸಂಖ್ಯೆ | ಖಾಲಿ ಹುದ್ದೆಗಳ ಒಟ್ಟು ಸಂಖ್ಯೆ |
|---|---|---|---|
| ಸಹಾಯಕ ಕಾರ್ಯನಿರ್ವಾಹಕ ಇಂಜಿನಿಯರ್ (ವಿ) | 1 | 1 | 0 |
| ಸಹಾಯಕ ಇಂಜನಿಯರ್ (ವಿ) | 3 | 3 | 0 |
| ಸಹಾಯಕ ಲೆಕ್ಕಾಧಿಕಾರಿ | 1 | 1 | 0 |
| ಕಿರಿಯ ಇಂಜಿನಿಯರ್ (ವಿ) | 7 | 6 | 1 |
| ಆಪರೇಟರ್/ಓವರ್ಸಿಯರ್/ಮಾಪಕ ಓದುಗ / ಸಹಾಯಕ ಉಗ್ರಾಣ ಪಾಲಕ | 22 | 9 | 13 |
| ಕಿರಿಯ ಮಾಪಕ ಓದುಗ | 3 | 2 | 1 |
| ಹಿರಿಯ ಸಹಾಯಕ | 1 | 0 | 1 |
| ಸಹಾಯಕ | 3 | 2 | 1 |
| ಕಿರಿಯ ಸಹಾಯಕ | 17 | 11 | 6 |
| ಬೆರಳಚ್ಚುಗಾರ | 1 | 1 | 0 |
| ದಫ್ತರಿ | 1 | 1 | 0 |
| ಕಛೇರಿ ಪರಿಚಾರಕ ಗ್ರೇಡ್-2 | 1 | 1 | 0 |
| ಸ್ಟೇಷನ್ ಮೆಕ್ಯಾನಿಕ್ ದರ್ಜೆ-2 | 2 | 0 | 2 |
| ಸ್ಟೇಷನ್ ಪರಿಚಾರಕ ದರ್ಜೆ-1 | 2 | 0 | 2 |
| ಸ್ಟೇಷನ್ ಪರಿಚಾರಕ ದರ್ಜೆ-2 | 6 | 3 | 3 |
| ಮೆಕ್ಯಾನಿಕ್ ದರ್ಜೆ-1 | 4 | 1 | 3 |
| ಮೆಕ್ಯಾನಿಕ್ ದರ್ಜೆ-2 | 17 | 16 | 1 |
| ಪವರ್ ಮ್ಯಾನ್ | 48 | 12 | 36 |
| ಸಹಾಯಕ ಪವರ್ ಮ್ಯಾನ್ | 76 | 8 | 68 |
| ಕಿರಿಯ ಪವರ್ ಮ್ಯಾನ್ | 52 | 46 | 6 |
| ಡ್ರೈವರ್ | 2 | 0 | 2 |
| ವಾಚ್ ಮನ್ | 2 | 2 | 0 |
| ಒಟ್ಟು | **272** | **126** | **146** |

ಟೆಂಡರ್ ನಲ್ಲಿ ಯಶಸ್ವಿಯಾಗುವ ಸಂಸ್ಥೆಯಿಂದ, ಆನ್-ಲೈನ್ ಆಪ್ಟಿಟ್ಯೂಡ್ ಪರೀಕ್ಷೆಯನ್ನು ಶೀಘ್ರದಲ್ಲಿಯೇ ನಡೆಸಲು ಕ್ರಮವಹಿಸಲಾಗುವುದು.

ಪ್ರಶ್ನೆ ಪತ್ರಿಕೆ ತಯಾರಿಸುವ ಸಂಸ್ಥೆಯು ಕೊರೋನಾ ವೈರಸ್ ಭೀತಿಯಿಂದ ಪ್ರಶ್ನೆ ಪತ್ರಿಕೆಗಳನ್ನು ಸಲ್ಲಿಸಲು ಕಾಲಾವಕಾಶದ ಅಗತ್ಯವಿದೆಯೆಂದು ತಿಳಿಸಿರುತ್ತಾರೆ.

ಆನ್-ಲೈನ್ ಆಪ್ಟಿಟ್ಯೂಡ್ ಪರೀಕ್ಷೆ ನಡೆಸಲು ಇಂಜಿನಿಯರಿಂಗ್ ಕಾಲೇಜುಗಳಲ್ಲಿ ಕಂಪ್ಯೂಟರ್ ಲ್ಯಾಬ್ ಗಳ ಅವಶ್ಯಕತೆ ಇರುತ್ತದೆ. ಸುಮಾರು 22,000 ಆನ್-ಲೈನ್ ಸೌಲಭ್ಯವಿರುವ ಕಂಪ್ಯೂಟರ್ ಗಳ ಅವಶ್ಯಕತೆ ಇರುವ ಕಾಲೇಜುಗಳಲ್ಲಿ ತರಗತಿ ಪರೀಕ್ಷೆಗಳು ನಡೆಯುತ್ತಿದ್ದುದರಿಂದ ಪರೀಕ್ಷಾ ಕೇಂದ್ರಗಳ ಅಲಭ್ಯತೆಯಿಂದಾಗಿ ಸ್ವಲ್ಪ ವಿಳಂಬವಾಗಿರುತ್ತದೆ. ಹಾಗಾಗಿ ಕಾಲೇಜುಗಳಿಗೆ ರಜೆ ಇದ್ದಾಗ ಪರೀಕ್ಷೆಯನ್ನು ನಡೆಸಬೇಕಾಗಿರುತ್ತದೆ.

